ಬೇಕಾಗುವುದು. ಸತ್ತ ಆಸ್ತಿವಂತರಿಗೂ ಅವರ ತರುವಾಯ ಆ ಆಸ್ತಿಯನ್ನು ಅನುಭವಿಸುವವರಿಗೂ ಇರುವ ಬಾಂಧವ್ಯವು ಸಮೀಪವಾದರೆ ಸುಂಕದ ದರ ಕಡಮೆಯಾಗಿರುವುದೂ, ದೂರದ್ದಾದರೆ ಸುಂಕದ ದರ ಹೆಚ್ಚಾಗಿರುವುದೂ ಉಂಟು.

**೩. ಅಧಿಕಲಾಭದ ತೆರಿಗೆ (Excess Profits Tax)**

ವಾರ್ಷಿಕ ವರಮಾನದ ಆಧಾರದ ಮೇಲೆ ವಸೂಲಾಗುವ ಇನ್ನೊಂದು ಬಗೆಯ ತೆರಿಗೆಯುಂಟು. ಅದನ್ನು ಅಧಿಕ ಲಾಭದ ತೆರಿಗೆ ಎಂದು ಕರೆಯಬಹುದು. ಲಾಭಕ್ಕೊಂದು ಒಂದು ಪರಿಮಿತಿಯನ್ನು ಗೊತ್ತುಮಾಡಿ, ಅದಕ್ಕೆ ಮೀರಿದ ಲಾಭ ಸಂಪಾದಿಸುವವರಿಂದ ಈ ತೆರಿಗೆಯನ್ನು ವಸೂಲುಮಾಡುವರು.

ಯುದ್ಧಗಳಿಗಾಗಿ ಸರ್ಕಾರಗಳು ಅಪಾರವಾದ ಹಣವನ್ನು ವೆಚ್ಚಮಾಡಬೇಕಾಗುತ್ತದೆ. ಅದನ್ನು ಸಂಪಾದಿಸುವುದಕ್ಕಾಗಿ ಅಧಿಕಲಾಭದ ತೆರಿಗೆಯನ್ನು ವಿಧಿಸುತ್ತಾರೆ.* ಯುದ್ಧಕಾಲದಲ್ಲಿಯೂ, ಆಮೇಲೆಯೂ ಧಾರಣೆವಾಸಿಗಳು ವಿಪರೀತವಾಗಿ ಏರುವುದನ್ನು ನಾವೂ ಕಂಡಿದ್ದೇವೆ. ಧಾರಣೆವಾಸಿಗಳು ಹೀಗೆ ಏರುವುದರಿಂದ ವ್ಯಾಪಾರಗಾರರಿಗೂ, ಕೃಷಿ ಕೈಗಾರಿಕೆಗಳನ್ನು ನಡೆಸುವವರಲ್ಲಿ ಕೆಲವರಿಗೂ ಹೆಚ್ಚಿನ ಆದಾಯ ಬರುವ ಸಂಭವ

---

* ಯುದ್ಧನಡೆಯುವ ಕಾಲದಲ್ಲಿ ಆ ಖರ್ಚಿಗೆ ಬೇಕಾಗುವ ಅಪಾರವಾದ ದ್ರವ್ಯವನ್ನು ಸಂಪಾದಿಸಲು ಸರ್ಕಾರಗಳು ಅನುಸರಿಸಿರುವ ನೀತಿಯನ್ನು ಇಲ್ಲಿ ವಿಮರ್ಶೆಮಾಡಿಲ್ಲ. ಯುದ್ಧವು ಆಕಸ್ಮಿಕವಾಗಿ ಸಂಭವಿಸುವುದು; ಆದುದರಿಂದ ಆ ವೇಳೆಯಲ್ಲಿ ವಿಧಿಸುವ ತೆರಿಗೆಗಳು, ಸರ್ಕಾರವು ಅನುಸರಿಸಿರುವ ನೀತಿ-ಇವೆಲ್ಲಾ ನಿಯಮಗಳ ಅಳತೆಗೆ ಸಿಕ್ಕುವುದಿಲ್ಲ.

ಒದಗುವುದು. ತಮ್ಮ ಆದಾಯ ಹೆಚ್ಚಲು ಅವರು ಯಾವ ವಿಧದಲ್ಲಿಯೂ ಕಷ್ಟಪಡಬೇಕಾಗಿಲ್ಲವಷ್ಟೆ. ಅದಕ್ಕಾಗಿ ಯಾವ ವಿಶೇಷ ಪ್ರಯತ್ನವನ್ನು ಅವರು ಮಾಡುವುದಿಲ್ಲ. ಅವರಿಗೆ ಬರುವ ಅಧಿಕ ಆದಾಯವು ಅನಾಯಾಸವಾಗಿ ಬರುವ ಆದಾಯ; ಯಾವುದೋ ಒಂದು ಸನ್ನಿವೇಶವು ಬಂದು ಒದಗಿದುದೇ ಅವರ ಆದಾಯವು ವಿಪರೀತವಾಗಿ ಹೆಚ್ಚಲು ಅನುಕೂಲ ವಾಯಿತು. ಆದ್ದರಿಂದ, ಹೀಗೆ ಸಂಪಾದಿಸಿದ ಹೆಚ್ಚು ಆದಾ ಯದ ಬಹು ಭಾಗವನ್ನು ಸರ್ಕಾರಕ್ಕೆ, ಪ್ರಜಾಹಿತಕಾರ್ಯಕ್ಕೆ ಕೊಡಬೇಕಾದುದು ನ್ಯಾಯ. ಹೀಗೆ ತೆರಿಗೆಯನ್ನು ಕೊಡಲು ಅವರು ಸಮರ್ಥರೂ ಹೌದು. ಉದಾಹರಣೆಗಾಗಿ, ಕರ್ಪೂರದ ಬೆಲೆ ತೊಲ ೧ಕ್ಕೆ ಎಂಟುಕಾಸಿನಿಂದ ಈಗ ಕೆಲವು ದಿವಸಗ ಳಿಂದೀಚೆಗೆ ಎರಡಾಣೆಗೆ ಏರಿತು. ಕರ್ಪೂರವನ್ನು ಹಿಂದೆ ಹೆಚ್ಚಾಗಿ ಕೊಂಡಿಟ್ಟು ಈಗ ಎರಡಾಣೆಯಂತೆ ಬಿಕರಿಮಾಡಿ ಅಧಿಕಲಾಭ ಸಂಪಾದಿಸುವ ವರ್ತಕನು ತನಗೆ ಬರುವ ಈ ಲಾಭದ ಹೆಚ್ಚಿನ ಭಾಗವನ್ನು ಪ್ರಜೆಗಳ ಹಿತಕ್ಕಾಗಿ ದುಡಿಯುವ ಸರ್ಕಾರಕ್ಕೆ ಸಲ್ಲಿಸಬೇಕೆಂದು ಕೇಳುವುದರಲ್ಲಿ ಅನ್ಯಾಯವೇನಿದೆ? ಯಾವುದೋ ಒಂದು ಸನ್ನಿವೇಶದ ಮಹಿಮೆಯಿಂದ ಅನಾಯಾಸವಾಗಿ ಬರುವ ಲಾಭದ ಹಣವು ಸಮಾಜಕ್ಕೆ ಸೇರಬೇಕಾದುದು ನ್ಯಾಯ ಎಂಬುದೇ ಈ ತೆರಿಗೆ ಯನ್ನು ಹಾಕುವುದರಲ್ಲಿನ ತತ್ವವೆನ್ನಬಹುದು.

ಈ ತೆರಿಗೆಯು ೧೯೧೬-೧೯೧೭ ರಲ್ಲಿ ಮೊದಲು ಜಾರಿಗೆ ಬಂದಿತು. ಕಳೆದ ಮಹಾ ಯುದ್ಧದಲ್ಲಿ ಈ ತೆರಿಗೆಯನ್ನು ಯೂರೋಪಿನ ಕೆಲವು ದೇಶಗಳಲ್ಲಿ ವಿಧಿಸಿದರು. ಕ್ರಮೇಣ ಇತರ ದೇಶಗಳಲ್ಲಿ ಅಂದರೆ ಕೆನಡ, ಸಂಯುಕ್ತಸಂಸ್ಥಾನ,

ಇಂಡಿಯ–ಇವೇ ಮೊದಲಾದ ದೇಶಗಳಲ್ಲಿ ಸರ್ಕಾರವು ಇದನ್ನು ಜಾರಿಗೆ ತಂದಿತು. ಈ ಬಗೆಯ ತೆರಿಗೆಯನ್ನು ಸಾಧಾರಣ ಕಾಲಗಳಲ್ಲಿ ವಿಧಿಸುವುದು ನ್ಯಾಯವಲ್ಲವೆಂಬುದು ಕೆಲವರ ಮತ. ಮತ್ತೆ ಕೆಲವರು ವರಮಾನದ ತೆರಿಗೆ, ಆಸ್ತಿಪಾಸ್ತಿ ಹಕ್ಕುದಾರಿಯ ತೆರಿಗೆಗಳಂತೆಯೇ ಇದನ್ನು ವಿಧಿಸುವುದು ಯುಕ್ತವೆಂದು ಅಭಿಪ್ರಾಯಪಡುತ್ತಾರೆ. ಸರ್ಕಾರಕ್ಕೆ ಬೇಕಾಗುವ ಹಣವನ್ನು ಶೇಖರಿಸಲು ಇದು ಅನುಕೂಲವಾದ ಮಾರ್ಗವೆಂದೂ ತೆರಲು ಸಾಮರ್ಥ್ಯವುಳ್ಳವರಿಂದಲೇ ವಸೂಲಾಗುವ ತೆರಿಗೆಯಾಗಿರುವುದೆಂದೂ ಇದನ್ನು ಸಾಧಾರಣಕಾಲದಲ್ಲಿ ವಿಧಿಸುವುದು ನ್ಯಾಯವೆಂಬ ವಾದವು ಈಚೀಚೆಗೆ ಬಲವಾಗುತ್ತಿದೆ.

ಇಂಗ್ಲೆಂಡಿನಲ್ಲಿ ಈ ತೆರಿಗೆಯಿಂದ ಬಂದ ಆದಾಯವನ್ನು ಈ ಕೆಳಗೆ ಕೊಟ್ಟಿರುತ್ತದೆ.

| ವರ್ಷ | ಸರ್ಕಾರದ ಆದಾಯ: (ಅಧಿಕ ಲಾಭ ತೆರಿಗೆಯಿಂದ) | ಒಟ್ಟು ರಾಜ್ಯಾದಾಯದಲ್ಲಿ ಶೇಕಡ |
|---|---|---|
| ೧೯೧೭ | ೧೪ ಕೋಟಿ ಪೌಂಡು | ೨೪% |
| ೧೯೧೮ | ೨೨ ,, ,, | ೩೦% |
| ೧೯೧೯ | ೨೮.೫ ,, ,, | ೩೨% |
| ೧೯೨೦ | ೨೯ ,, ,, | ೨೨% |

ಈಗ ನಡೆಯುತ್ತಿರುವ ಯುದ್ಧದ ಖರ್ಚಿಗೆ ಬೇಕಾಗುವ ಹಣವನ್ನು ಒದಗಿಸುವ ಸಂದರ್ಭದಲ್ಲಿ ಪುನಃ ಈ ತೆರಿಗೆಯು ಪ್ರಪಂಚದ ನಾನಾಭಾಗಗಳಲ್ಲಿ ಹೆಚ್ಚಿನ ಪ್ರಾಶಸ್ತ್ಯವನ್ನು ಪಡೆದಿದೆ. ಲಾಭಗಾರರ ಕೈವಾಡವನ್ನು ಹತೋಟಿಯಲ್ಲಿಡಲು ಈ ತೆರಿಗೆಯಿಂದ ಬಲುಮಟ್ಟಿಗೆ ಸಾಧ್ಯವೆನ್ನಬಹುದು.

## ೪. ಆಮದು ರಫ್ತುಗಳ ಸುಂಕ (Customs Duties)

ಪರೋಕ್ಷವಾದ ತೆರಿಗೆಗಳಲ್ಲಿ ಹೆಚ್ಚು ದಿವಸಗಳಿಂದಲೂ ಬಳಕೆಯಲ್ಲಿರುವುದು ಆಮದು ರಫ್ತುಗಳ ಮೇಲಿನ ಸುಂಕ. ಇಂಡಿಯ ಸರ್ಕಾರದ ತೆರಿಗೆ ರಾಜ್ಯಾದಾಯದಲ್ಲಿನ ಬಹುಭಾಗವು ಇದರಿಂದ ಬರುತ್ತದೆಯೆಂಬುದು ಈ ಕೆಳಗಿನ ಪಟ್ಟಿಯಿಂದ ತಿಳಿಯುತ್ತದೆ.

| ದೇಶದ ಹೆಸರು | ಈ ಸುಂಕದ ವರಮಾನ | ಒಟ್ಟು ತೆರಿಗೆ ಹುಟ್ಟುವಳಿಯಲ್ಲಿ ಶೇಕಡ |
|---|---|---|
| ಇಂಗ್ಲೆಂಡ್ | ೨೨.೬ ಕೋಟಿ ಪೌಂಡುಗಳು | ೨೪.೫% |
| ಸಂಯುಕ್ತಸಂಸ್ಥಾನ | ೩೫.೯ ಕೋಟಿ ಡಾಲರುಗಳು | ೬% |
| ಇಂಡಿಯ | ೪೩.೮೧ ಕೋಟಿ ರೂ. ಗಳು | ೩೬% |

ದೇಶದ ರಾಜಕೀಯ ಸರಹದ್ದಿನಿಂದ ಒಳಗೆ ಬರುವ ಮತ್ತು ಹೊರಗೆ ಹೋಗುವ ಸಾಮಾನುಗಳ ಮೇಲೆ ಈ ತೆರಿಗೆಯನ್ನು ವಿಧಿಸುತ್ತಾರೆ. ಈ ಸುಂಕದಲ್ಲಿ ಎರಡು ಬಗೆ. ಸರ್ಕಾರಕ್ಕೆ ಹಣವನ್ನು ಗಳಿಸಿಕೊಡುವ ಉದ್ದೇಶದಿಂದಲೇ ವಿಧಾಯಕವಾಗುವ ಸುಂಕ ಒಂದನೆಯದು. ದೇಶೀಯ ಕೈಗಾರಿಕೆಗಳನ್ನು ರಕ್ಷಿಸಿ ಅವು ಬೆಳೆಯುವಂತೆ ಮಾಡುವ ಉದ್ದೇಶವುಳ್ಳ ಸುಂಕ ಎರಡನೆಯದು. ಇದನ್ನು ರಕ್ಷಣಾಸುಂಕವೆಂದು ಕರೆಯಬಹುದು; ಇಲ್ಲಿ ಸರ್ಕಾರಕ್ಕೆ ಬರುವ ಸುಂಕದ ಆದಾಯ ಮುಖ್ಯವಾಗಿಲ್ಲ.

ಕೈಗಾರಿಕೆಯ ಬೆಳವಣಿಗೆಗೂ ತೆರಿಗೆಗೂ ಸಂಬಂಧವುಂಟು. ಉದಾಹರಣೆಗಾಗಿ ನಮ್ಮ ದೇಶದಲ್ಲಿ ರೇಷ್ಮೆ ಕೈಗಾರಿಕೆ ಬೆಳೆಯಬೇಕಾದರೆ ಹೊರಗಿನಿಂದ ಬರುವ ರೇಷ್ಮೆ ಸ್ಪರ್ಧೆಯನ್ನು

ತಡೆಗಟ್ಟಬೇಕು. ಅಂದರೆ ಹೊರಗಿನಿಂದ ಬರುವ ರೇಷ್ಮೆ ಪದಾರ್ಥಗಳ ಬೆಲೆ ನಮ್ಮ ದೇಶದಲ್ಲಿ ತಯಾರಾಗುವ ರೇಷ್ಮೆ ಪದಾರ್ಥಗಳ ಬೆಲೆಗಿಂತ ಕಡಮೆಯಾಗಿರಕೂಡದು. ಹೊರಗಿನಿಂದ ಆಮದಾಗಿ ಬರುವ ರೇಷ್ಮೆ ಸಾಮಾನುಗಳ ಮೇಲೆ ಸುಂಕವನ್ನು ಹಾಕುವುದರಿಂದ, ಅವನ್ನು ಕೊಳ್ಳುವವರು ಹೆಚ್ಚಿನ ಬೆಲೆಯನ್ನು ತೆರಬೇಕಾಗುವುದು. ಸ್ವದೇಶಿ ರೇಷ್ಮೆ ಅದೇ ಬೆಲೆಗೆ ಅಥವಾ ಕಡಮೆ ಬೆಲೆಗೆ ದೊರೆಯುವಾಗ, ಹೆಚ್ಚು ಹಣ ತೆತ್ತು ಪರದೇಶಿ ರೇಷ್ಮೆಯನ್ನು ಕೊಳ್ಳುವುದು ಅಪೂರ್ವ. ಆದ್ದರಿಂದ ಪರದೇಶಿ ರೇಷ್ಮೆಯ ಆಮದು ಕಡಮೆಯಾಗಿ ಸ್ವದೇಶಿ ರೇಷ್ಮೆಗೆ ಉತ್ತೇಜನ ದೊರೆಯುತ್ತದೆ. ಹೀಗೆ ಕೈಗಾರಿಕೆಗಳನ್ನು ಊರ್ಜಿತಗೊಳಿಸಲು ಸರ್ಕಾರವು ಸುಂಕದ ಈ ನೀತಿಯನ್ನು ಉಪಯೋಗಿಸುವುದು ಈಚೆಗೆ ಬಹು ವಾಡಿಕೆಯಾಗಿದೆ.

ಇಂಡಿಯಾ ದೇಶದಲ್ಲಿ ಮೇಲ್ಕಂಡ ಎರಡು ಬಗೆಯ ಸುಂಕಗಳೂ ಉಂಟು. ಕಬ್ಬಿಣ, ಉಕ್ಕು, ರೇಷ್ಮೆ, ಹತ್ತಿ, ಸಕ್ಕರೆ ಇವೇ ಮೊದಲಾದುವುಗಳ ಮೇಲೆ ರಕ್ಷಣಾಸುಂಕವನ್ನು ಹಾಕಿದ್ದಾರೆ. ಹೊರದೇಶಗಳಿಂದ ನಾವು ತರಿಸಿಕೊಳ್ಳುವ ನೂರಾರು ಸಾಮಾನುಗಳ ಮೇಲೆ ಒಂದನೆಯ ಬಗೆಯ ಸುಂಕವನ್ನು ಹಾಕಿದ್ದಾರೆ. ಮೇಲಿನ ಪಟ್ಟಿಯಲ್ಲಿ ಕಾಣಿಸಿರುವ ಸುಂಕದ ಮೊತ್ತದ ಬಹುಭಾಗ ಸರ್ಕಾರಕ್ಕೆ ಬಂದಿರುವುದು ಈ ಬಗೆಯ ಸುಂಕದಿಂದ. ನಮ್ಮ ದೇಶದಿಂದ ರಫ್ತು ಮಾಡುವ ಸಣಬು, ಟೀ ಸೊಪ್ಪು ಮೊದಲಾದ ಕೆಲವು ಸಾಮಾನುಗಳ ಮೇಲೂ ಈ ಬಗೆಯ ಸುಂಕವುಂಟು. ರಕ್ಷಣಾಸುಂಕದ ದರವು ಒಂದನೆಯ ದಕ್ಕಿಂತ ಹೆಚ್ಚಾಗಿರುತ್ತದೆ. ಆಮದು ರಫ್ತು ಸರಕುಗಳ ಬೆಲೆಯನ್ನು ಅನುಸರಿಸಿ ಸುಂಕವನ್ನು ವಿಧಿಸುವುದೊಂದು ಕ್ರಮ;

ಸರಕಿಗಿಷ್ಟೆಂದು ನಿರ್ಧರಮಾಡಿ ಸುಂಕವನ್ನು ವಿಧಿಸುವು ದೊಂದು ಕ್ರಮ.

ಈ ತೆರಿಗೆಯನ್ನು ಮೊದಲು ಸರ್ಕಾರದ ಬೊಕ್ಕಸಕ್ಕೆ ಸಲ್ಲಿ ಸುವವರು ಮಂಡಿ ವ್ಯಾಪಾರಿಗಳು ಮತ್ತು ವರ್ತಕರು. ತಾವು ಸಾಮಾನುಗಳನ್ನು ಕೊಂಡಾಗ ಕೊಟ್ಟ ತೆರಿಗೆಯನ್ನು ಸಾಮಾನು ಗಳ ಬೆಲೆಯೊಂದಿಗೆ ಸೇರಿಸಿ ಮಾರುವುದರಿಂದ ತಾವು ತೆತ್ತ ಹಣವನ್ನು ಕಾಲಕ್ರಮದಲ್ಲಿ ವಸೂಲ್ಮಾಡಿಕೊಳ್ಳುವರು. ಆದ್ದ ರಿಂದ ತೆರಿಗೆಯನ್ನು ಕೊಡುವವರು ನಿಜವಾಗಿ ಪದಾರ್ಥವನ್ನು ಕೊಳ್ಳುವವರು ಎಂದೇ ತಿಳಿಯಬೇಕು. ಆದ್ದರಿಂದಲೇ ಇದನ್ನು ಪರೋಕ್ಷವಾದ ತೆರಿಗೆ ಎಂದು ಮೊದಲು ಕರೆದುದು.

## ೫. ಆಬ್ಕಾರಿ ಸುಂಕ (Excise Duties).

ಆಮದು ರಫ್ತುಗಳ ಮೇಲೆ ಹೇರುವ ಸುಂಕದಂತೆ, ಆಬ್ಕಾರಿ ಸುಂಕವೂ ಒಂದು ಪರೋಕ್ಷವಾದ ತೆರಿಗೆ. ಒಂದು ದೇಶದ ಲ್ಲಿಯೇ ತಯಾರಾಗಿ ಅಲ್ಲಿಯೇ ಉಪಯೋಗಿಸಲ್ಪಡುವ ಪದಾ ರ್ಥಗಳ ಮೇಲೆ ಸರ್ಕಾರವು ಹಾಕುವ ಸುಂಕವನ್ನು ಆಬ್ಕಾರಿ ಸುಂಕವೆನ್ನಬಹುದು. ಹಿಂದೆ ವಿವರಿಸಿದ ಸುಂಕವನ್ನು ಹೊರ ಸುಂಕವೆಂದೂ, ಆಬ್ಕಾರಿ ತೆರಿಗೆಯನ್ನು ಒಳಸುಂಕವೆಂದೂ ವಿಂಗಡಿಸಬಹುದು.

ಹೆಂಡ, ಸಾರಾಯಿ, ಅಫೀಮು ಮೊದಲಾದ ಮಾದಕ ದ್ರವ್ಯಗಳೂ ಬೆಂಕಿಕಡ್ಡಿ, ಬೀಡಿ, ಉಪ್ಪು, ಸಕ್ಕರೆ ಮೊದಲಾದ ಪದಾರ್ಥಗಳೂ ಇಂಡಿಯಾ ದೇಶದಲ್ಲಿಯೇ ತಯಾರಾಗುತ್ತವೆ. ಹೊರಗಿನಿಂದ ಆಮದಾಗುವ ಸಕ್ಕರೆಯ ಮೇಲೆ ರಕ್ಷಣಾ

ಸುಂಕವನ್ನು ಹಾಕಿರುತ್ತಾರೆ; ನಮ್ಮಲ್ಲಿ ತಯಾರಾಗುವ ಸಕ್ಕರೆಯ ಮೇಲೆ ಆಬ್ಕಾರಿ ಸುಂಕವನ್ನು ವಿಧಿಸಿರುತ್ತಾರೆ. ಹೊರಗಿನಿಂದ ಸಕ್ಕರೆ ಬಾರದೆ ಇದ್ದರೆ ಸರ್ಕಾರಕ್ಕೆ ತೆರಿಗೆ ವರಮಾನ ಕಡಮೆಯಾಗುವುದಿಲ್ಲವೆ ಎಂದು ಕೇಳಬಹುದು. ಈ ನಷ್ಟ ಕೇವಲ ತಾತ್ಕಾಲಿಕವಾದದ್ದು. ದೇಶದಲ್ಲಿ ಸಕ್ಕರೆ ಕೈಗಾರಿಕೆ ಅಭಿವೃದ್ಧಿಹೊಂದಿದ ಮೇಲೆ ಅದರ ಮೇಲೆ ಆಬ್ಕಾರಿ ಸುಂಕವನ್ನು ಹಾಕಿ ಸರ್ಕಾರಕ್ಕೆ ತೆರಿಗೆ ಆದಾಯದಲ್ಲಿ ಉಂಟಾದ ನಷ್ಟವನ್ನು ಸರಿಪಡಿಸಲು ಸಾಧ್ಯವಾಗುತ್ತದೆ.

ಆಬ್ಕಾರಿ ಸುಂಕವನ್ನು ಮುಖ್ಯವಾಗಿ ಎರಡು ಉದ್ದೇಶಗಳಿಗಾಗಿ ವಿಧಿಸುವುದುಂಟು. ಸರ್ಕಾರದ ಖಜಾನೆಗೆ ಹಣವನ್ನು ಶೇಖರಿಸಬೇಕೆಂಬ ಉದ್ದೇಶವೇನೋ ಮೊದಲನೆಯದಾಗಿ ಇದ್ದೇ ಇದೆ. ಮಾದಕಪದಾರ್ಥಗಳ ಉಪಯೋಗವನ್ನು ಕಡಮೆ ಮಾಡುವ ಉದ್ದೇಶ ಎರಡನೆಯದು. ಹೆಂಡ, ಸಾರಾಯಿ, ಅಫೀಮು ಮೊದಲಾದ ಮಾದಕಪದಾರ್ಥಗಳ ಸೇವನೆಯನ್ನು ಹತೋಟಿಯಲ್ಲಿಡುವುದಕ್ಕಾಗಿ ಹೆಚ್ಚಿನ ತೆರಿಗೆಯನ್ನು ಹೇರಿ ಅವುಗಳ ಬೆಲೆಯನ್ನು ಹೆಚ್ಚಿಸಿಬಿಟ್ಟಿದ್ದಾರೆ. ಇವರ ತಯಾರಿಕೆ ಮಾರಾಟಗಳು ಕೂಡ ಸರ್ಕಾರದ ಹತ್ತೋಟಿಯಲ್ಲಿರುವುದೂ ಪರದೇಶದಿಂದ ಆಮದಾಗಿ ಬರುವ ಮಾದಕ ದ್ರವ್ಯಗಳಮೇಲೆ ಹೆಚ್ಚಿನ ದರದಲ್ಲಿ ಸುಂಕವನ್ನು ಹೇರುವುದೂ ಇದಕ್ಕಾಗಿಯೇ. ಈ ಬಗೆಯ ಆಬ್ಕಾರಿ ಸುಂಕವನ್ನು ನಿರೋಧಕ ಆಬ್ಕಾರಿಸುಂಕ (Restrictive Excise) ಎಂದು ಕರೆಯಬಹುದು.

ಉಪ್ಪು, ಸಕ್ಕರೆ, ಬೆಂಕಿಕಡ್ಡಿ ಮೊದಲಾದ ಸರಕುಗಳ ಮೇಲೆ ಆಬ್ಕಾರಿ ಸುಂಕ ಹಾಕುವುದು ಈ ವಸ್ತುಗಳ

ಸೇವನೆಯನ್ನು ತಗ್ಗಿಸಬೇಕೆಂಬ ಉದ್ದೇಶದಿಂದಲ್ಲ. ಇವು ಪ್ರತಿಯೊಬ್ಬನಿಗೂ ಬೇಕಾದ ವಸ್ತುಗಳೆಂದು ಸರ್ಕಾರಕ್ಕೆ ಗೊತ್ತು. ಇದನ್ನು ತಿಳಿದುಕೊಂಡೇ, ತೆರಿಗೆ ರಾಜ್ಯಾದಾಯವನ್ನು ಪ್ರಜೆಗಳಿಗೆ ಹೆಚ್ಚಿನ ತೊಂದರೆಯಿಲ್ಲದೆ ಸುಲಭ ರೀತಿಯಲ್ಲಿ ಹೆಚ್ಚಿಸಿಕೊಳ್ಳಲು ಇದು ಅನುಕೂಲವಾದ ಮಾರ್ಗವೆಂದು ಆಬ್ಕಾರಿ ಸುಂಕವನ್ನು ಈ ಸಾಮಾನುಗಳ ಮೇಲೆ ಹಾಕುವುದು. ಜನಗಳಿಗೆ ಅನಿವಾರ್ಯವಾಗಿ ಬೇಕಾಗುವ ವಸ್ತುಗಳನ್ನೇ ಚುನಾಯಿಸಿ ಅವುಗಳ ಮೇಲೆ ಮೊದಲನೆಯ ಬಗೆಯ ಆಬ್ಕಾರಿ ಸುಂಕವನ್ನು ವಿಧಿಸುವರು. ಹೀಗೆ ಮಾಡುವುದರಲ್ಲಿ ತೆರಿಗೆಯ ದರ ಮಾತ್ರ ತೀರ ಅಲ್ಪವಾಗಿರಬೇಕೆಂಬ ತತ್ವವನ್ನು ಅನುಸರಿಸಬೇಕು. ಹಾಗೆ ಕಡಮೆಯಾಗಿಲ್ಲದಿದ್ದರೆ ಜನರು ಬಹು ಕಷ್ಟಕ್ಕೆ ಸಿಕ್ಕಬೇಕಾಗುತ್ತದೆ. ಆವಶ್ಯಕವಾಗಿ ಬೇಕಾಗುವ ಪದಾರ್ಥಗಳ ಸೇವನೆಗೆ ಕೂಡ ಅಡ್ಡಿ ಆತಂಕಗಳು ಬಂದು, ತೆರಿಗೆಯು ಅಷ್ಟು ಫಲದಾಯಕವಾಗದೆ ಹೋಗುವ ಸಂಭವವೂ ಒದಗಬಹುದು. ಸಕ್ಕರೆಯ ಮೇಲಿನ ಸುಂಕ ಬಹಳಹೆಚ್ಚಿದರೆ ಸಕ್ಕರೆಯನ್ನೇ ಬಿಟ್ಟು ಬೆಲ್ಲವನ್ನು ಉಪಯೋಗಿಸಲು ಆರಂಭಿಸುವರು. ಇದರಿಂದ ಸಕ್ಕರೆ ಕೈಗಾರಿಕೆಗೆ ನಷ್ಟವಾಗುವುದು; ಕಬ್ಬುಬೆಳೆದ ರೈತರಿಗೂ ತೊಂದರೆಯುಂಟಾಗಬಹುದು. ನಿರೋಧಕ ಆಬಕ್ಕಾರಿ ಸುಂಕದ ದರ ಮಾತ್ರ ಹೆಚ್ಚಾಗಿಯೇ ಇರಬೇಕು. ಮಾದಕ ದ್ರವ್ಯಗಳ ಉಪಯೋಗವನ್ನು ತಗ್ಗಿಸಬೇಕೆಂಬುದೇ ಆ ತೆರಿಗೆಯ ಮುಖ್ಯ ಉದ್ದೇಶವಾಗಿರುವುದರಿಂದ, ಆ ಪದಾರ್ಥಗಳ ಬೆಲೆಯನ್ನು ಬಹುಮಟ್ಟಿಗೆ ಹೆಚ್ಚಿಸಿ, ಸಾಮಾನ್ಯರಿಗೆ ಕೊಳ್ಳಲು ಅಸಾಧ್ಯವಾಗಿರುವಂತೆ ಮಾಡಬೇಕು. ಇತರ ಸುಂಕಗಳಂತೆ ಆಬ್ಕಾರಿ ಸುಂಕವನ್ನೂ ಆ ಪದಾರ್ಥಗಳನ್ನು ಕೊಳ್ಳುವವರೇ

ಪರೋಕ್ಷವಾಗಿ ಸರ್ಕಾರಕ್ಕೆ ಕೊಡುತ್ತಾರೆ. ಮೊದಲು ಸುಂಕ ತೆತ್ತವರು ಕ್ರಮೇಣ ಅದನ್ನು ಇತರರಿಗೆ ವರ್ಗಮಾಡುವರು.

### ೬. ವ್ಯಾಪಾರ ತೆರಿಗೆ (Sales-tax).

ಇದೂ ಪರೋಕ್ಷವಾದ ತೆರಿಗೆಯೇ. ಈ ತೆರಿಗೆಯು ಯೂರೋಪು (ಇಂಗ್ಲೆಂಡ್ ಹೊರತಾಗಿ) ಮತ್ತು ಅಮೆರಿಕ ಖಂಡಗಳ ಹಲವು ದೇಶಗಳಲ್ಲಿ ಪ್ರಚಾರವಾಗಿ ಹೆಚ್ಚು ಪ್ರಾಮುಖ್ಯ ವನ್ನು ಪಡೆಯುತ್ತಿದೆ. ಸುಂಕದ ಮತ್ತು ವರಮಾನದ ತೆರಿಗೆಗಳ ಮೂಲಕ ಎಷ್ಟು ಆದಾಯ ಬರುವುದೋ ಅಷ್ಟು ಆದಾಯ ಈ ವ್ಯಾಪಾರ ತೆರಿಗೆಯ ಮೂಲಕ ಸರ್ಕಾರಗಳಿಗೆ ಬರುತ್ತಿದೆ. ಕೆಲವು ದೇಶಗಳಲ್ಲಂತೂ ಈ ತೆರಿಗೆಯ ಆದಾಯವು ಸುಂಕ ವರಮಾನ ತೆರಿಗೆಗಳಿಂದ ಬರುವ ಆದಾಯವನ್ನು ಮೀರಿಸಿದೆ. ವ್ಯಾಪಾರ ತೆರಿಗೆಯಿಂದ ಎಷ್ಟು ಹೆಚ್ಚಿನ ಹುಟ್ಟುವಳಿಯನ್ನು ಸರ್ಕಾರಗಳು ಪಡೆಯುತ್ತಿವೆಯೆಂಬುದನ್ನು ಮುಂದಿನ ಪುಟದಲ್ಲಿ ಕೊಟ್ಟಿರುವ ಪಟ್ಟಿಯಲ್ಲಿ ಕಾಣಬಹುದು.

2. ಇಂಡಿಯಾ ದೇಶದಲ್ಲಿ ೧೯೩೭ರಿಂದ ಈಚೆಗೆ, ಪ್ರಾಂತ ಸ್ವಾತಂತ್ರ್ಯ ದೊರೆತ ಮೇಲೆ, ಪ್ರಾಂತ ಸರ್ಕಾರಗಳ ಕಾರ್ಯ ಕಲಾಪಗಳು ವಿಶೇಷವಾಗುತ್ತಾ ಬಂದಿವೆ. ಈ ಕಾರ್ಯಗಳಿಗಾಗಿ ಪ್ರತಿಯೊಂದು ಪ್ರಾಂತವೂ ತನ್ನ ಹುಟ್ಟುವಳಿಯನ್ನು ಹೆಚ್ಚಿಸಿ ಕೊಳ್ಳಬೇಕಾಗಿದೆ. ಇದಕ್ಕಾಗಿ ಪ್ರಾಂತ ಸರ್ಕಾರಗಳು ಹೊಗೆ ಸೊಪ್ಪು, ಪೆಟ್ರೋಲು, ವಿದ್ಯುಚ್ಛಕ್ತಿ, ಜೀವನೋಪಾಯವೃತ್ತಿ ಗಳು—ಇವುಗಳ ಮೇಲೆ ತೆರಿಗೆಗಳನ್ನು ವಿಧಿಸುತ್ತಿವೆ. ಹಾಗೆಯೇ ಇಂಡಿಯಾ ಸರ್ಕಾರವೂ ತನ್ನ ಆಯವ್ಯಯವನ್ನು ಸರಿತೂಗಿಸಿಕೊ ಳ್ಳುವುದಕ್ಕಾಗಿ ಹೊಸ ತೆರಿಗೆಗಳನ್ನು ವಿಧಿಸಲು ಪ್ರಯತ್ನಿಸುತ್ತಿದೆ.

| ದೇಶ | ವರ್ಷ | ವರಮಾನದ ತೆರಿಗೆ | ಸುಂಕದಿಂದ ಬಂದದ್ದು | ವ್ಯಾಪಾರದ ತೆರಿಗೆಯಿಂದ | ಒಟ್ಟು |
|---|---|---|---|---|---|
| ಫ್ರಾನ್ಸ್ ...... | ೧೯೩೪ | ೧೯·೫% | ೧೫·೦% | ೧೭·೫% | ೫೨·೦% |
| ಜರ್ಮನಿ ...... | ೧೯೩೨–೩೩ | ೯·೪% | ೨೨·೩% | ೧೯·೦% | ೫೦·೮% |
| ಹಂಗೆರಿ ...... | ೧೯೩೨–೩೩ | ೧೦·೬% | ೪·೮% | ೧೨·೦% | ೨೮·೩% |
| ಜೆಕೊಸ್ಲೊವೇಕಿಯಾ ...... | ೧೯೩೩ | ೧೪·೬% | ೬·೫% | ೨೩·೦% | ೪೪·೦% |
| ಆಸ್ಟ್ರಿಯಾ ...... | ೧೯೩೪ | ೧೯·೪% | ೧೬·೦% | ೨೦·೨% | ೫೬·೬% |

3. ಮದರಾಸು ಸರ್ಕಾರವು ವ್ಯಾಪಾರ ತೆರಿಗೆಯನ್ನು ವಿಧಿಸ ಬೇಕೆಂದು ಪ್ರಯತ್ನಮಾಡಿ ಅಲ್ಲಿನ ಶಾಸನ ಸಭೆಯ ಒಪ್ಪಿಗೆ ಯನ್ನು ಪಡೆದ ವಿಷಯ ಎಲ್ಲರಿಗೂ ತಿಳಿದಿದೆ. ಈ ತೆರಿಗೆ ಪ್ರಜಾ ಸಮುದಾಯಕ್ಕೆಲ್ಲಾ ಅನ್ವಯಿಸುವುದರಿಂದ ಇದರ ದರ ಕಡಮೆಯಾಗಿದ್ದರೂ ಹೆಚ್ಚು ಆದಾಯ ಬರುತ್ತದೆ. ವ್ಯಾಪಾರವು ಹೆಚ್ಚಿದಂತೆಲ್ಲಾ ವರಮಾನವೂ ಹೆಚ್ಚುತ್ತದೆ.

4. ವ್ಯಾಪಾರ ತೆರಿಗೆಯನ್ನು ಎಲ್ಲ ಪದಾರ್ಥಗಳ ಮೇಲೂ ಎಲ್ಲ ವರ್ತಕರ ಮೇಲೂ ವಿಧಿಸಬಹುದು; ಅಥವಾ ಸಣ್ಣ ವ್ಯಾಪಾರಗಳಿಗೂ ಅತ್ಯಾವಶ್ಯಕವಾದ ಪದಾರ್ಥಗಳಿಗೂ ವೃತ್ತಿ ಗಳಿಗೂ ಈ ತೆರಿಗೆ ಅನ್ವಯಿಸದಂತೆ ಮಾಡಬಹುದು. ಎಲ್ಲರೂ ಉಪಯೋಗಿಸುವ ಪದಾರ್ಥಗಳ ಮೇಲೆ ಕಡಮೆದರದ ವ್ಯಾಪಾ ರದ ತೆರಿಗೆಯನ್ನು ವಿಧಿಸುವುದೂ, ಭೋಗಸಾಮಗ್ರಿಗಳ ಮೇಲೂ ಅತಿಬೆಲೆಯುಳ್ಳ ಪದಾರ್ಥಗಳ ಮೇಲೂ ಹೆಚ್ಚಿನ ದರದ ತೆರಿಗೆ ಗಳನ್ನು ವಿಧಿಸುವುದೂ ವಾಡಿಕೆ.

5. ಜೀವನಕ್ಕೆ ಆವಶ್ಯಕವಾದ ಪದಾರ್ಥಗಳ ಮೇಲೆ ತೆರಿಗೆ ಗಳನ್ನು ಹೇರಬಾರದೆಂಬ ನಿಯಮಕ್ಕೆ ಇದು ವಿರುದ್ಧವಾದು ದೇನೋ ಹೌದು. ಆದರೆ ತೆರಿಗೆಯ ದರ ತೀರ ಅಲ್ಪವಾಗಿರು ವುದರಿಂದ ಹೆಚ್ಚಿನ ಕೆಡುಕೇನೂ ಆಗಲಾರದು. ಹೆಚ್ಚಿನ ತೊಂದ ರೆಯಿಲ್ಲದೆ ಅಧಿಕವರಮಾನವನ್ನು ತರುವ ವ್ಯಾಪಾರ ತೆರಿಗೆ ಜನ ಪ್ರಿಯವಾಗುತ್ತದೆ.

———

# ಅಧ್ಯಾಯ ೪

## ಮೈಸೂರು ತೆರಿಗೆ

ನಮ್ಮ ಸಂಸ್ಥಾನದ ಹುಟ್ಟುವಳಿಗೆ ಸಂಬಂಧಪಟ್ಟ ಕೆಲವು ಅಂಶಗಳನ್ನು ಮಾತ್ರ ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

### (೧) ಒಟ್ಟು ಹುಟ್ಟುವಳಿ

ಈಗ ಮೈಸೂರು ಸರ್ಕಾರದ ಒಟ್ಟು ಹುಟ್ಟುವಳಿ ಸುಮಾರು ೩೭೫ ಲಕ್ಷ ರೂಪಾಯಿಗಳು. ಈ ಶತಮಾನದ ಆದಿಭಾಗದಲ್ಲಿ ಹುಟ್ಟುವಳಿ ೧೯೨ ಲಕ್ಷ ರೂಪಾಯಿಗಳು ಮಾತ್ರವಾಗಿತ್ತು. ಎರಡುಕೋಟಿಗೆ ಕಡಮೆಯಾಗಿದ್ದ ವರಮಾನವು ನಾಲ್ಕು ಕೋಟಿಯ ಮಿತಿಯನ್ನು ಮುಟ್ಟಿರುತ್ತದೆ. ಹುಟ್ಟುವಳಿಯ ಬಾಬುಗಳನ್ನು ಮೂರು ಗುಂಪುಗಳಾಗಿ ವಿಂಗಡಿಸಿ ವಿಮರ್ಶೆ ಮಾಡುವುದು ನಮ್ಮಲ್ಲಿ ವಾಡಿಕೆಗೆ ಬಂದಿರುತ್ತದೆ.

#### ೧. ದೈವಾನುಗ್ರಹದಿಂದ ಪ್ರಾಪ್ತವಾಗಿರುವ ಸಂಪತ್ತು—

ಚಿನ್ನದ ಮೇಲಿನ ರಾಜಾದಾಯವು ಇವುಗಳಲ್ಲಿ ಮುಖ್ಯವಾದದ್ದು. ಕಾಡುಖಾತೆಯಿಂದ ಬರುವ ವರಮಾನವನ್ನು ಇದೇ ರೀತಿ ಪರಿಗಣಿಸುವುದು ಉತ್ತಮ. ಕ್ರೋಂ ಗಣಿಗಳಿಂದಲೂ ಗಂಧದ ಮರಗಳಿಂದಲೂ ಬರುವ ಆದಾಯವನ್ನು ಈ ಗುಂಪಿಗೆ ಸೇರಿಸಿದರೆ ಒಟ್ಟು ಈ ಬಾಬಿನ ಹುಟ್ಟುವಳಿ ಸುಮಾರು ೫೦-೬೦ ಲಕ್ಷ ರೂಪಾಯಿಗಳಾಗುತ್ತದೆ.

### ೨. ವಾಣಿಜ್ಯೋದ್ಯಮಗಳ ಆದಾಯ—

ಇವುಗಳನ್ನು ಮೂರು ಪಂಗಡಗಳಾಗಿ ವಿಂಗಡಿಸಬಹುದು.

(೧) ಸರ್ಕಾರವೇ ಮೂಲಧನ ಹಾಕಿ ವ್ಯವಸ್ಥೆಯ ಜವಾಬ್ದಾರಿಯನ್ನು ಹೊತ್ತಿರುವ ಕೈಗಾರಿಕೆಯ ಉದ್ಯಮಗಳಿಂದ ಬರತಕ್ಕ ಆದಾಯ ಒಂದು ಪಂಗಡವಾಗುತ್ತದೆ. ರೈಲ್ವೆಗಳು, ವಿದ್ಯುಚ್ಛಕ್ತಿಯ ಉತ್ಪತ್ತಿ ಕಾರ್ಯಗಳು; ನೀರಾವರಿ ಕೆಲಸ, ಭದ್ರಾವತಿಯ ಕಬ್ಬಿಣದ ಮತ್ತು ಉಕ್ಕಿನ ಕಾರ್ಖಾನೆ, ಸಾಬೂನು ಕಾರ್ಖಾನೆ, ಸಿಮೆಂಟು ಕಾರ್ಖಾನೆ ಮೊದಲಾದುವುಗಳ ಆದಾಯ ಈ ಪಂಗಡಕ್ಕೆ ಸೇರುವುದು.

(೨) ಕಾರ್ಖಾನೆ ಕಂಪೆನಿಗಳ ಷೇರುಗಳನ್ನು ಕೊಳ್ಳುವುದರಿಂದಲೂ, ಅದಕ್ಕೆ ತೋರಿಸುವ ಇತರ ರಿಯಾಯಿತಿಗಳಿಂದಲೂ ಸರ್ಕಾರಕ್ಕೆ ಬರುವ ಆದಾಯ. ಸಕ್ಕರೆ ಕಾರ್ಖಾನೆ, ಕಾಗದದ ಕಾರ್ಖಾನೆ, ಹೊಗೆಸೊಪ್ಪಿನ ಕಾರ್ಖಾನೆ, ಎಣ್ಣೆಗಳನ್ನೂ ಕೃತಕ ತುಪ್ಪವನ್ನೂ ತಯಾರಿಸುವ ಕಾರ್ಖಾನೆ, ಗಂಧಕ ದ್ರಾವಕ ಮತ್ತು ಅಮೋನಿಯಂ ಸಲ್ಫೇಟುಗಳನ್ನು ತಯಾರುಮಾಡುವ ಕಾರ್ಖಾನೆ—ಇವುಗಳಲ್ಲಿ ಸರ್ಕಾರವು ಕೊಂಡಿರುವ ಷೇರುಗಳ ಲಾಭ ಈ ಗುಂಪಿಗೆ ಸೇರುವುದು.

(೩) ಕೈಗಾರಿಕೆಗಳನ್ನು ಅಭಿವೃದ್ಧಿ ಮಾಡಬೇಕೆಂಬ ಉದ್ದೇಶದಿಂದ ಸರ್ಕಾರವು ಖಾಸಗಿ ಜನರಿಗೂ ಕಂಪೆನಿಗಳಿಗೂ ಬ್ಯಾಂಕಿನಂತೆ ಸಾಲಕೊಟ್ಟು ಸಂಪಾದಿಸುವ ಬಡ್ಡಿಯ ರೂಪವಾದ ಆದಾಯ.

ಈ ಬಾಬುಗಳ ಹುಟ್ಟುವಳಿ ಈಚೀಚೆಗೆ ಅಧಿಕವಾಗುತ್ತಿದೆ. ಇದರಿಂದ ಸರ್ಕಾರವು ಲಾಭದಾಯಕವಾದ ಅನೇಕ ಉದ್ಯಮ

ಗಳನ್ನು ಕೈಕೊಳ್ಳಲು ಸಾಧ್ಯವಾಗಿದೆ; ಜನರ ಸಂಪಾದನೆಯ ಶಕ್ತಿ ಹೆಚ್ಚಾಗಿ ಅವರ ಬದುಕು ಉತ್ತಮಗೊಳ್ಳಲು ಅವಕಾಶ ವುಂಟಾಗಿದೆ.

**೩. ತೆರಿಗೆಯಿಂದ ಬರುವ ಆದಾಯ—**

ತೆರಿಗೆಯ ಹುಟ್ಟುವಳಿ ಸುಮಾರು ೨೩೦ ಲಕ್ಷ ರೂಪಾಯಿ ಗಳು. ಇದನ್ನು ಈ ಕೆಳಗಿನ ಬಾಬುಗಳಿಂದ ಸಂಗ್ರಹಿಸಲಾಗು ತ್ತಿದೆ.[1]

(i) ಜಮೀನು ಕಂದಾಯ.
(ii) ಅಬ್ಕಾರಿ—(೧) ಸೇಂದಿ, (೨) ಇತರ.
(iii) ವರಮಾನದ ತೆರಿಗೆ.
(iv) ಚಿಲ್ಲರೆ ತೆರಿಗೆಗಳು—ಜೂಜಿನ ತೆರಿಗೆ, ವಿನೋದದ ತೆರಿಗೆ ಇತ್ಯಾದಿ.

ಮೈಸೂರು ಸರ್ಕಾರದ ಒಟ್ಟು ಹುಟ್ಟುವಳಿ ಮತ್ತು ತೆರಿಗೆಯ ಆದಾಯಗಳಿಗೆ ಸಂಬಂಧಪಟ್ಟ ಕೆಲವು ಮುಖ್ಯವಾದ ಅಂಕಿ ಗಳನ್ನು ಇಲ್ಲಿ ಕೊಡಬಹುದು. ಫೀ ವರಮಾನವನ್ನು ತೆರಿಗೆ ಯೆಂದು ಪರಿಗಣಿಸಿ ಒಟ್ಟು ತೆರಿಗೆವರಮಾನವನ್ನು ಲೆಕ್ಕ ಮಾಡಿರುತ್ತದೆ. ಸ್ಥಳೀಯ ಸಂಸ್ಥೆಗಳ ವರಮಾನವನ್ನು ಇಲ್ಲಿ ಗಣಿಸಿರುವುದಿಲ್ಲ.

---

[1] ಕಾಡುಖಾತೆಯಿಂದ ಬರುವ ಹುಟ್ಟುವಳಿಯನ್ನೆಲ್ಲಾ ಮೊದಲನೆಯ ಗುಂಪಿಗೆ ಎಂದರೆ ದೈವಾನುಗ್ರಹದಿಂದ ಪ್ರಾಪ್ತವಾದ ಆದಾಯದ ಗುಂಪಿಗೆ ಸೇರಿಸಿರುವುದರಿಂದ ಅದನ್ನು ತೆರಿಗೆ ಹುಟ್ಟುವಳಿಯಲ್ಲಿ ಬಿಟ್ಟಿದೆ. ಚಿಲ್ಲರೆ ತೆರಿಗೆಗಳಲ್ಲಿ ಸಾಮಾನ್ಯವಾಗಿ ಸೇರಿಸುವ ಸಕ್ಕರೆ ಮತ್ತು ಬೆಂಕಿಕಡ್ಡಿ ತೆರಿಗೆ ಗಳನ್ನು ಅಬ್ಕಾರಿ ತೆರಿಗೆಗಳೆಂದು ಭಾವಿಸಿದೆ.

## ೧. ಒಟ್ಟು ಹುಟ್ಟುವಳಿ

| ವರ್ಷ | ಒಟ್ಟು ಹುಟ್ಟುವಳಿ ಲಕ್ಷ ರೂ. | ಜಮೀನು ಕಂದಾಯ ಲಕ್ಷ ರೂ. | ಒಟ್ಟು ತೆರಿಗೆ ಹುಟ್ಟುವಳಿ ಲಕ್ಷ ರೂ. | ಒಟ್ಟು ಹುಟ್ಟುವಳಿಯಲ್ಲಿ ತೆರಿಗೆ ಹುಟ್ಟುವಳಿಯ ಶೇಕಡಾ ದರ |
|---|---|---|---|---|
| ೧೯೦೧ | ೧೯೨ | ೯೮ | ೧೪೮ | ೭೭% |
| ೧೯೧೧ | ೨೪೬ | ೧೦೬ | ೧೭೨ | ೬೭% |
| ೧೯೨೧ | ೩೧೩ | ೧೦೮ | ೨೧೨ | ೫೧% |
| ೧೯೩೧ | ೩೩೨ | ೧೧೧ | ೨೧೨ | ೫೨% |
| ೧೯೩೬ | ೪೦೦ | ೧೩೦ | ೨೩೪ | ೫೮% |
| ೧೯೩೯ ಬಡ್ಜೆಟ್ ಅಂದಾಜು | ೩೮೬ | ೧೨೩ | ೨೩೫ | ೬೦% |

## ೨. ತೆರಿಗೆ ಹುಟ್ಟುವಳಿ ಬಾಬುಗಳು

| ವರ್ಷ | ಜಮೀನು ಕಂದಾಯ ಲಕ್ಷ ರೂ. | ಆಬ್ಕಾರಿ, ಸೇಂದಿ ಲಕ್ಷ ರೂ. | ವರ್ತಮಾನದ ತೆರಿಗೆ ಲಕ್ಷ ರೂ. | ಸ್ಟಾಂಪು ರಿಜಿಸ್ಟ್ರೇಷನ್ ಕೋರ್ಟು ಫೀ ಲಕ್ಷ ರೂ. | ಇತರ ಆಬ್ಕಾರಿ ಮತ್ತು ಚಿಲ್ಲರೆ ತೆರಿಗೆಗಳು ಲಕ್ಷ ರೂ. |
|---|---|---|---|---|---|
| ೧೯೩೦ ...... | ೧೨೬ | ೬೯ | ೧೨ | ೨೪ | ...... |
| ೧೯೩೧ ...... | ೧೧೧ | ೬೭ | ೧೨ | ೨೨ | ...... |
| ೧೯೩೨ ...... | ೧೧೯ | ೫೫ | ೧೩ | ೨೨ | ...... |
| ೧೯೩೩ ...... | ೧೨೬ | ೫೪ | ೧೩ | ೨೩ | ...... |
| ೧೯೩೪ ...... | ೧೧೮ | ೫೩ | ೨೦ | ೨೧ | ...... |
| ೧೯೩೫ ...... | ೧೧೧ | ೫೧ | ೨೪ | ೨೨ | ೪½ |
| ೧೯೩೬ ...... | ೧೨೮ | ೪೯ | ೨೩ | ೨೨ | ೧೦ |
| ೧೯೩೭ ...... | ೧೩೦ | ೪೮ | ೨೨ | ೨೨ | ೧೦ |
| ೧೯೩೮ ತಿದ್ದುಪಡಿ | ೧೨೦ | ೪೮ | ೨೯ | ೨೨ | ೧೭ |
| ೧೩೩೯ ಬಡ್ಜೆಟ್ ಅಂದಾಜು ...... | ೧೨೩ | ೪೮ | ೨೭ | ೨೨ | ೧೫ |

ಮೇಲೆ ಕೊಟ್ಟಿರುವ ಪಟ್ಟಿಯನ್ನು ಪರೀಕ್ಷಿಸಿ ಅದರಿಂದ ತಿಳಿದುಬರುವ ಅಂಶಗಳನ್ನು ಒಂದೊಂದಾಗಿ ತೆಗೆದುಕೊಳ್ಳೋಣ.

೧. ೧೯೦೧ರಲ್ಲಿ ೧೯೨ ಲಕ್ಷ ರೂಪಾಯಿಗಳ ಒಟ್ಟು ಹುಟ್ಟುವಳಿ ಇದ್ದು ಈಗ ೩೮೭ ಲಕ್ಷಕ್ಕೆ ಏರಿದೆ. ಎಂದರೆ ಸರ್ಕಾರದ ವರಮಾನ ನಲವತ್ತು ವರುಷಗಳಲ್ಲಿ ಇಮ್ಮಡಿಯಾಗಿದೆ. ಇದು ಹೇಗಾಯಿತು ?

೨. ತೆರಿಗೆ ಹುಟ್ಟುವಳಿ ೧೪೮ ಲಕ್ಷದಿಂದ ೨೩೫ ಲಕ್ಷಕ್ಕೆ ಏರಿದೆ. ಎಂದರೆ ೧೯೦೧ರಲ್ಲಿ ಒಟ್ಟು ಹುಟ್ಟುವಳಿಯಲ್ಲಿ ಶೇ. ೬೬ ರಷ್ಟಿದ್ದ ಈ ಹುಟ್ಟುವಳಿ ಈಗ ಶೇ. ೬೦ಕ್ಕೆ ಇಳಿದಿದೆ. ಹೀಗಿದ್ದರೂ ಒಟ್ಟು ಹುಟ್ಟುವಳಿ ಅಧಿಕವಾಗಿರುತ್ತದೆ. ಇದಕ್ಕೆ ಕಾರಣವೇನು ? ತೆರಿಗೆಯ ಬಾಬಿನಿಂದಲ್ಲದೆ ಇತರ ವಿಧವಾಗಿ ಎಂದರೆ ಗಣಿ, ಕಾಡು, ವಾಣಿಜ್ಯ, ಕೈಗಾರಿಕೆ ಮುಂತಾದುವುಗಳಿಂದ ಬರುವ ವರಮಾನ ಹೆಚ್ಚಿರುವುದು ಮುಖ್ಯ ಕಾರಣ. ಈ ವರಮಾನ ೧೯೦೧ ರಲ್ಲಿ ೪೪ ಲಕ್ಷ ರೂಪಾಯಿಗಳಿದ್ದು ಈಗ ೧೫೨ ಲಕ್ಷಕ್ಕೆ ಏರಿರುತ್ತದೆ.

೩. ಭೂಕಂದಾಯ ೧೯೦೧ರಲ್ಲಿ ೯೮ ಲಕ್ಷ ಇದ್ದದ್ದು ಈಗ ೧೨೩ ಲಕ್ಷವಾಗಿದೆ. ಕಳೆದ ೪೦ ವರ್ಷಗಳಲ್ಲಿ ಸಾಗುವಳಿಗೆ ಬಂದಿರುವ ಜಮೀನಿನ ವಿಸ್ತೀರ್ಣ ಹೆಚ್ಚಿರುವುದೂ[1] ನೀರಾವರಿ ಕೆಲಸಗಳಿಂದ ತರಿ ಬಾಗಾಯಿತು ವ್ಯವಸಾಯ ಹೆಚ್ಚಿರುವುದೂ ಈ ವರಮಾನ ಹೆಚ್ಚಲು ಮುಖ್ಯಕಾರಣ. ಕಂದಾಯದ ದರದಲ್ಲಿ ಆಗುವ ವ್ಯತ್ಯಾಸಗಳೂ ಕಾರಣವಾಗ

---

[1] ಸಾಗುವಳಿಯಲ್ಲಿರುವ ಜಮೀನು ವಿಸ್ತೀರ್ಣ ೧೯೦೫ರಲ್ಲಿ ೭೨ ಲಕ್ಷ ಎಕರೆಯಿದ್ದು ೧೯೪೫ ರಲ್ಲಿ ೭೯ ಲಕ್ಷ ಎಕರೆಗೆ ಏರಿರುತ್ತದೆ.

ಬಹುದು. ಒಟ್ಟಿನಲ್ಲಿ ಜಮೀನು ಕಂದಾಯದ ಆದಾಯಕ್ಕೆ ಸರ್ಕಾರದ ಒಟ್ಟು ಹುಟ್ಟುವಳಿಯಲ್ಲಿ ಹಿಂದೆ ಇದ್ದಷ್ಟು ಪ್ರಾಮುಖ್ಯ ಈಗ ಇರುವಂತೆ ಕಾಣುವುದಿಲ್ಲ. ೧೯೦೧ರ ಒಟ್ಟು ಹುಟ್ಟುವಳಿಯಲ್ಲಿ ಜಮೀನು ಕಂದಾಯವು ಶೇ. ೫೧ರಷ್ಟಿದ್ದು ಈಗ ಶೇ. ೩೨ಕ್ಕೆ ಇಳಿದಿರುತ್ತದೆ; ಅರ್ಧದಿಂದ ಮೂರನೆಯ ಒಂದು ಭಾಗಕ್ಕೆ ಇಳಿದಿದೆ.

೪. ಜಮೀನು ಕಂದಾಯದಲ್ಲಿ ಬರುವ ಆದಾಯ ಅಷ್ಟು ಏರಿಳಿತಗಳಿಗೆ ಒಳಗಾಗಿಲ್ಲವೆಂದೂ ಸೇಂದಿ ಆಬ್ಕಾರಿಯ ವರಮಾನ ಕ್ರಮೇಣ ಇಳಿದು ಮೂರರಲ್ಲಿ ಒಂದು ಭಾಗದಷ್ಟು ಕಡಮೆಯಾಗಿರುವುದೆಂದೂ (ಇದು ಶುಭಸೂಚನೆ) ಸ್ಟ್ಯಾಂಪು ಮುಂತಾದುವುಗಳ ಆದಾಯವು ಹೆಚ್ಚು ಬದಲಾಯಿಸುತ್ತಿಲ್ಲವೆಂದೂ ಗೊತ್ತಾಗುತ್ತದೆ. ಪಾನನಿರೋಧ ಪ್ರಯತ್ನವು ಮುಂದುವರಿದ ಹಾಗೆಲ್ಲಾ ಸೇಂದಿ ಆಬ್ಕಾರಿಯಿಂದ ಬರುವ ಆದಾಯವು ಬಹಳಮಟ್ಟಿಗೆ ಕಡಮೆಯಾಗುವುದು. ವರಮಾನದ ತೆರಿಗೆಯಿಂದಲೂ ಇತರ ಆಬ್ಕಾರಿ ಮತ್ತು ಚಿಲ್ಲರೆ ತೆರಿಗೆಗಳಿಂದಲೂ ಆದಾಯವು ಹೆಚ್ಚುತ್ತಿದೆ. ಸಂಸ್ಥಾನದ ಒಟ್ಟು ಹುಟ್ಟುವಳಿ ಅಧಿಕವಾಗುತ್ತ ಬಂದಿರುವುದು ಮುಖ್ಯವಾಗಿ ಜಮೀನು ಕಂದಾಯ ಹೊರತಾಗಿ ಇರುವ ಇತರ ಬಗೆಯ ಆದಾಯಗಳಿಂದ ಎಂಬ ವಿಷಯ ಸ್ಪಷ್ಟವಾಗುತ್ತದೆ. ಆದರೆ ಇದರಿಂದ ಈಗಿರುವ ಭೂಕಂದಾಯದ ಸಿಸ್ತಿನಲ್ಲಿ ದೋಷವಿಲ್ಲವೆಂದು ಹೇಳಲಾಗುವುದಿಲ್ಲ.

## (೨) ತೆರಿಗೆ ಸಿಸ್ತು

ನಮ್ಮ ಸರ್ಕಾರದ ಆದಾಯದ ಸುಮಾರು ಮೂರನೆಯ

ಒಂದು ಭಾಗವು ಭೂಕಂದಾಯದಿಂದ ಬರುತ್ತದೆ; ಇದಕ್ಕೆ ಮೊದಲನೆಯ ಸ್ಥಾನವನ್ನು ಕೊಡಬಹುದು. ಎರಡನೆಯದು ಆಬ್ಕಾರಿಬಾಬು; ಮೂರನೆಯದು ವರಮಾನದ ತೆರಿಗೆ.

೧. ಭೂಕಂದಾಯ—

ಮೈಸೂರು ದೇಶದ ಭೂಕಂದಾಯದ ಸಿಸ್ತು ಬಹುಮಟ್ಟಿಗೆ ಬೊಂಬಾಯಿನಲ್ಲಿರುವ ಪದ್ಧತಿಯನ್ನು ಅನುಸರಿಸಿದೆ. ಮೂವತ್ತು ವರ್ಷಕ್ಕೊಂದು ಸಲ ಭೂಮಿಯನ್ನು ಅಳೆಸಿ ಭೂಗುಣ, ಫಸಲು ಮತ್ತು ಅದರ ವರಮಾನ— ಇವುಗಳನ್ನು ಗಮನಿಸಿ ಕಂದಾಯವನ್ನು ನಿರ್ಣಯಿಸುತ್ತಾರೆ. ಭೂಕಂದಾಯವು ಇಷ್ಟೇ ಎಂದು ನಿಶ್ಚಿತವಾದ ತೆರಿಗೆ. ಹೀಗೆ ಗೊತ್ತಾದ ದರಕ್ಕಿಂತ ಮುಂದೆ ಮೂವತ್ತು ವರ್ಷವಾದನಂತರ ಗೊತ್ತುಮಾಡುವ ದರವು ಹೆಚ್ಚಾಗಿಯೂ ಕಡಮೆಯಾಗಿಯೂ ಇರಬಹುದು. ಆದರೆ ಒಂದು ನಿರ್ದಿಷ್ಟವಾದ ಪ್ರಮಾಣವನ್ನು ಮೀರಿರಕೂಡದೆಂಬ ನಿಯಮವುಂಟು. ಕಂದಾಯವನ್ನು ನಾಲ್ಕು ಕಿಸ್ತುಗಳಲ್ಲಿ ವಸೂಲು ಮಾಡುತ್ತಾರೆ. ಮೊದಲನೆಯ ಕಂತನ್ನು ದವಸ ಬಂದ ಸ್ವಲ್ಪ ಕಾಲವಾದ ಮೇಲೆ ಕೊಡಬೇಕಾಗಿದೆ. ಚೆನ್ನಾಗಿ ಬೆಳೆ ಆಗದ ವರ್ಷಗಳಲ್ಲಿ ಸರ್ಕಾರವು ಕಂದಾಯವನ್ನು ಇಳಿಸುವುದಕ್ಕೆ ಅಥವಾ ವಜಾಮಾಡುವುದಕ್ಕೆ ಅವಕಾಶವಿರುತ್ತದೆ. ಭೂಕಂದಾಯದಲ್ಲಿ ಸರ್ಕಾರವು ಒದಗಿಸುವ ನೀರಿನ ತೆರಿಗೆಯೂ ಸೇರಿರುತ್ತದೆ. ಸರ್ಕಾರವು ತನ್ನ ಹಿಡುವಳಿಯಲ್ಲಿರುವ ಜಮೀನುಗಳನ್ನು ಮಾರುವುದರಿಂದ ಬರುವ ಹಣವೂ ಪರಾಧೀನವಾದ ಜಮೀನುಗಳಿಂದ ಬರುವ ಗುತ್ತಿಗೆಯ ಹಣವೂ ಭೂಕಂದಾಯದ ಲೆಕ್ಕಕ್ಕೇ ಸೇರುತ್ತವೆ.

## ೨. ಆಬ್ಕಾರಿ—

ಆಬ್ಕಾರಿ ಸಿಸ್ತಿನಲ್ಲಿ ಎರಡು ವಿಧಗಳುಂಟು. ಮಾದಕ ದ್ರವ್ಯಗಳಿಗೆ ಸಂಬಧಪಟ್ಟ ಸಿಸ್ತು ಮೊದಲನೆಯದು; ನಮ್ಮಲ್ಲಿ ತಯಾರಾಗುವ ಇತರ ಪದಾರ್ಥಗಳು ಎಂದರೆ, ಸಕ್ಕರೆ, ಬೆಂಕಿ ಕಡ್ಡಿ ಇವುಗಳಿಗೆ ಸಂಬಂಧಿಸಿದ್ದು ಎರಡನೆಯದು. ಎರಡನೆಯ ಗುಂಪಿಗೆ ಸೇರಿದ ತೆರಿಗೆಗಳು ಸುಂಕದ ರೂಪದಲ್ಲಿರುತ್ತವೆ. ಇವುಗಳನ್ನು ಚಿಲ್ಲರೆ ತೆರಿಗೆಗಳಿಂದ ಬರುವ ಆದಾಯದ ಬಾಬಿಗೆ ಸೇರುವುದು ವಾಡಿಕೆಯಾಗಿದೆ.

### (ಅ) ಮಾದಕದ್ರವ್ಯಗಳು :

(೧) ನಮ್ಮ ಸಂಸ್ಥಾನದಲ್ಲಿ ಉತ್ಪತ್ತಿಯಾಗುವ ಹೆಂಡ, ಸಾರಾಯಿ ಮುಂತಾದ ಪದಾರ್ಥಗಳನ್ನು ಮಾಡಿ ಮಾರುವ ವಿಚಾರದಲ್ಲಿ ಒಂದು ಬಗೆಯಾದ ಕಟ್ಟಳೆ ಇದೆ; ಹೆಂಡ ಇಳಿಸುವುದಕ್ಕೂ, ಸಾರಾಯಿ ತಯಾರುಮಾಡುವುದಕ್ಕೂ, ಇವುಗಳನ್ನು ಮಾರುವುದಕ್ಕೂ ಸ್ವತಸ್ಸಿದ್ಧವಾದ ಹಕ್ಕು ಯಾರಿಗೂ ಇಲ್ಲ. ಸರ್ಕಾರದಿಂದ ಈ ಹಕ್ಕನ್ನು ಕೊಂಡುಕೊಳ್ಳಬೇಕು. ಹೆಂಡವನ್ನು ಇಳಿಸಲು ಮರಕ್ಕಿಷ್ಟೆಂದು ಗೊತ್ತುಮಾಡುವ ರೀತಿ ಮರದ ತೆರಿಗೆಯನ್ನು ಸರ್ಕಾರಕ್ಕೆ ಸಲ್ಲಿಸಬೇಕು. ಕಾನೂನು ಮೇರೆಗೆ ವರ್ಷಕ್ಕೊಂದು ಸಲ ಮಾಡುವ ಸೇಂದಿ ಹರಾಜಿನಲ್ಲಿ ಹೆಂಡ, ಸಾರಾಯಿ ಮೊದಲಾದ ನಾಡು ದ್ರಾವಕಗಳನ್ನು ಮಾರುವ ಹಕ್ಕನ್ನು ಸರ್ಕಾರಕ್ಕೆ ಹಣ ಸಲ್ಲಿಸಿ ಕೊಳ್ಳಬಹುದು.

(೨) ವಿದೇಶಿ ಮಾದಕದ್ರವ್ಯಗಳನ್ನು ಮಾರಲು ಸರ್ಕಾರದಿಂದ ಲೈಸೆನ್ಸ್ ಪಡೆಯಬೇಕು. ಲೈಸೆನ್ಸ್ ಫೀ ಜೊತೆಗೆ ರಿಜಿಸ್ಟ್ರೇಷನ್ ಮತ್ತು ಸರ್‌ಛಾರ್ಜುಗಳನ್ನು ಸರ್ಕಾರದ ಆಬ್ಕಾರಿ

ಇಲಾಖೆಗೆ ಸಲ್ಲಿಸಬೇಕು. ಮೈಸೂರು ಸರ್ಕಾರಕ್ಕೆ ಈ ಪದಾರ್ಥಗಳ ಮೇಲೆ ಯಾವ ವಿಧವಾದ ಹೊರಸುಂಕವನ್ನೂ ವಿಧಿಸಲು ಅಧಿಕಾರವಿಲ್ಲ. ಇದು ಇಂಡಿಯಾ ಸರ್ಕಾರಕ್ಕೆ ಮಾತ್ರ ಸೇರಿದುದು.

(೬) ಗಾಂಜಾ, ಅಫೀಮು ಮುಂತಾದವುಗಳ ಮಾರಾಟವೂ ಬೆಳೆಯುವ ಹಕ್ಕೂ ಸರ್ಕಾರದ ಹತೋಟಿಗೆ ಒಳಪಟ್ಟಿರುತ್ತದೆ. ಗಾಂಜಾವನ್ನು ಬೆಳೆದ ರೈತರಿಂದ ಸರ್ಕಾರವು ಕೊಂಡು, ಅದರ ಚಿಲ್ಲರೆ ಬಿಕರಿಗೆ ಲೈಸೆನ್ಸ್ ಮೂಲಕ ಏರ್ಪಾಡು ಮಾಡುತ್ತದೆ. ಅಫೀಮು ವಿಷಯದಲ್ಲಿ ಮೈಸೂರು ಸರ್ಕಾರಕ್ಕೆ ಅದನ್ನು ಬೆಳೆಯುವ ಹಕ್ಕು ಇರುವುದಿಲ್ಲ; ಅದು ಇಂಡಿಯಾ ಸರ್ಕಾರದ ವಶದಲ್ಲಿದೆ. ಅದು ಬೆಳೆದ ಅಫೀಮನ್ನು ಮೈಸೂರು ಸರ್ಕಾರವು ಕೊಂಡು, ಚಿಲ್ಲರೆ ಬಿಕರಿಗೆ ಒದಗಿಸುತ್ತದೆ. ಇತರ ಮಾದಕ ದ್ರವ್ಯಗಳಂತೆಯೇ ಗಾಂಜಾ ಅಫೀಮುಗಳನ್ನು ಮಾರುವ ಹಕ್ಕನ್ನು ಹರಾಜಿನಲ್ಲಿ ಪಡೆಯಬೇಕು.

### (೨) ಇತರ ಪದಾರ್ಥಗಳ ಮೇಲಿನ ಆಬ್ಕಾರಿ :

ಇದನ್ನು ಎಕ್ಸೈಜ್ ಸುಂಕವೆಂದು ಕರೆಯುತ್ತಾರೆ. ಸ್ಟಾಂಪಿನ ಮಾದರಿಯಲ್ಲಿ ಬೆಂಕಿಕಡ್ಡಿ ಪೊಟ್ಟಣಗಳಿಗೆ ಅಂಟಿಸಿರುವ ಚೀಟಿಗಳನ್ನು ನೀವು ನೋಡಿರಬಹುದು. ಇದನ್ನು ಇಂಡಿಯ ಸರ್ಕಾರದಿಂದ ಕೊಂಡು ಬೆಂಕಿಕಡ್ಡಿ ಪೊಟ್ಟಣಗಳಿಗೆ ಅಂಟಿಸಿ ಅನಂತರ ಮಾರಬೇಕೆಂಬ ಕಡ್ಡಾಯದ ನಿಯಮವುಂಟು. ಪೊಟ್ಟಣಗಳಲ್ಲಿ ಇರುವ ಬೆಂಕಿಕಡ್ಡಿಗೆ ತಕ್ಕಂತೆ ಈ ಸುಂಕವನ್ನು ವಿಧಿಸುತ್ತಾರೆ. ಬೆಂಕಿಕಡ್ಡಿಯ ಮೇಲೆ ಇಂಡಿಯ ಸರ್ಕಾರವು ೧೯೩೪ ರಲ್ಲಿ ಈ ಸುಂಕವನ್ನು ಹೇರಿತು. ಆ ಕೆಲವು ದಿವಸಗಳಲ್ಲಿ ಇದಕ್ಕೆ

ಸಂಬಂಧಪಟ್ಟ ಕಾನೂನು ನಮ್ಮ ಸಂಸ್ಥಾನದಲ್ಲಿಯೂ ಜಾರಿಗೆ ಬರಬೇಕಾಯಿತು. ಇದರಿಂದ ನಾವು ಉಪಯೋಗಿಸುವ ಬೆಂಕಿ ಕಡ್ಡಿ ಪೊಟ್ಟಣಗಳ ಮೇಲೆ ಸಂದಾಯವಾಗುವ ಸುಂಕದಲ್ಲಿ ಒಂದು ಭಾಗವನ್ನು ಮೈಸೂರು ಸರ್ಕಾರಕ್ಕೆ ಇಂಡಿಯ ಸರ್ಕಾರವು ಕೊಡಲು ಒಪ್ಪಿತು. ೧೯೩೪ರಲ್ಲಿ ಇಂಡಿಯ ಸರ್ಕಾರವು ಹಾಕಿದ ಸುಂಕಕ್ಕೆ ಅನುಸಾರವಾಗಿ ನಮ್ಮಲ್ಲಿ ತಯಾರಾಗುವ ಸಕ್ಕರೆಯ ಮೇಲೆ ಮೈಸೂರು ಸರ್ಕಾರವು ಸುಂಕವನ್ನು ಹಾಕಿರುತ್ತದೆ. ಸಕ್ಕರೆಯ ಮೇಲೆ ವಿಧಿಸುವ ಆಬ್ಕಾರಿ ಸುಂಕವೂ ಇಂಡಿಯಾ ಸರ್ಕಾರದ ನಿಯಮಗಳಿಗೆ ಅನುಗುಣವಾಗಿರುತ್ತದೆ. ಹೀಗೆ ಯಾವುದಾದರೊಂದು ಪದಾರ್ಥದ ಮೇಲೆ ನಮ್ಮ ಸರ್ಕಾರವು ಈಗ ಸುಂಕಹೇರಿಲ್ಲವೆಂದು ಇಟ್ಟುಕೊಳ್ಳೋಣ. ಇಂಡಿಯಾ ಸರ್ಕಾರವು ತನ್ನ ಆಡಳಿತದ ಪ್ರದೇಶದಲ್ಲಿ ಉತ್ಪತ್ತಿಯಾಗುವ ಆ ಪದಾರ್ಥಗಳ ಮೇಲೆ ಆಬ್ಕಾರಿ ಸುಂಕಹಾಕಿದರೆ ಆಗ ನಮ್ಮ ಸಂಸ್ಥಾನವೂ ಅದೇ ಸುಂಕವನ್ನು ಹಾಕಬೇಕಾಗುತ್ತದೆ.

## (೩) ವರಮಾನದ ತೆರಿಗೆ:

ಮೈಸೂರಿನಲ್ಲಿ ವರಮಾನದ ತೆರಿಗೆ ಏರ್ಪಟ್ಟದ್ದು ೧೯೨೦ರಲ್ಲಿ. ನಮ್ಮ ದೇಶದಲ್ಲಿ ಉತ್ಪತ್ತಿಯಾಗುವ ವರಮಾನ ಮತ್ತು ಹೊರಗೆ ಉತ್ಪತ್ತಿಯಾಗಿ ಇಲ್ಲಿಗೆ ಬರುವ ವರಮಾನ—ಇವೆರಡರ ಮೇಲೂ ತೆರಿಗೆ ಹಾಕುತ್ತಾರೆ. ಹಿಂದಿನ ವರ್ಷದ ವರಮಾನವನ್ನು ನಿರ್ಧರಿಸಿ ಆ ವರಮಾನದ ಮೇಲೆ ಈ ತೆರಿಗೆಯನ್ನು ರೂಪಾಯಿಗೆ ಇಷ್ಟು ಕಾಸುಗಳೆಂದು ವಿಧಿಸುವರು. ವರ್ಷಕ್ಕೆ ೨೪೦೦ ರೂಪಾಯಿಗಳ ಸಂಪಾದನೆ ಇಲ್ಲದ ಹೊರತು ಈ ತೆರಿಗೆಯನ್ನು ಖಾಸಗಿ ಜನರು ಕೊಡಬೇಕಾಗಿಲ್ಲ. ಸಂಬಳ

ಸಾರಿಗೆ ಬರುವವರಿಂದಲೂ ಕಂಪೆನಿಗಳ ನಫೆಯನ್ನು ಹೊಂದು ವವರಿಂದಲೂ, ವರ್ತಕರಿಂದಲೂ, ಜಮಿನು ಹೊರತಾಗಿ ಉಳಿದ ಆಸ್ತಿಯಿಂದ ಆದಾಯ ಪಡೆಯುವವರಿಂದಲೂ ಈ ತೆರಿಗೆಯನ್ನು ವಸೂಲು ಮಾಡುವರು.

(೪) ಫೀಜು :

ರಿಜಿಸ್ಟ್ರೇಷನ್, ಕೋರ್ಟು, ಸ್ಟ್ಯಾಂಪು ಎಂದು ತೆರಿಗೆ ಫೀಜನ್ನು ಮೂರು ವಿಧವಾಗಿ ವಿಂಗಡಿಸಬಹುದು. ಆಸ್ತಿಪಾಸ್ತಿ ಗಳ ಕ್ರಯ, ಭೋಗ್ಯ, ಆಧಾರ, ದಾನ ಈ ಮೊದಲಾದುವು ಗಳು ನಡೆದಾಗ ಆ ವಿಷಯವನ್ನು ಸರ್ಕಾರದ ಗಮನಕ್ಕೆ ತರು ವುದು ಅವಶ್ಯಕ; ಏಕೆಂದರೆ ಆ ಆಸ್ತಿಗಳ ಯಜಮಾನರು ಯಾರೆಂಬುದು ಸರ್ಕಾರಕ್ಕೂ ಗೊತ್ತಾಗಬೇಕು, ಪ್ರಜೆಗಳಿಗೂ ತಿಳಿಯಬೇಕು. ಇದಕ್ಕೆ ಸೇರಿದ ಕಾಗದಪತ್ರಗಳನ್ನು ರಿಜಿಸ್ಟರು ಮಾಡಿಸಬೇಕೆಂಬ ನಿಯಮವಿದೆ. ಹಾಗೆ ಮಾಡಲು ಫೀಜು ಕೊಡಬೇಕು. ವ್ಯಾಜ್ಯಗಳನ್ನು ಸಿಸ್ತಿಗೆ ಒಳಪಡಿಸುವ ಉದ್ದೇ ಶಕ್ಕಾಗಿಯೂ ಸರಿಯಾದ ವಿಚಾರಣೆ ತೀರ್ಪುಗಳಿಗಾಗಿಯೂ ಕೋರ್ಟಿಗೆ ಫೀಜನ್ನು ಸಲ್ಲಿಸಬೇಕು. ಇವನ್ನು ಸ್ಟ್ಯಾಂಪು ರೂಪ ವಾಗಿ ವಸೂಲು ಮಾಡುತ್ತಾರೆ. ಬರವಣಿಗೆಯ ಮೂಲಕ ನಡೆ ಯುವ ಪಲವು ವ್ಯವಹಾರಗಳನ್ನು ಸ್ಟ್ಯಾಂಪು ಕಾಗದದ ಮೇಲೆಯೇ ಮಾಡಬೇಕೆಂಬ ನಿಯಮವಿದೆ. ಇದರಂತೆ ಸ್ಟ್ಯಾಂಪು ಮತ್ತು ಛಾಪಾಕಾಗದ ಪಡೆಯಲು ಹಣ ಪಾವತಿ ಮಾಡಬೇ ಕಾಗುತ್ತದೆ. ಇಂಥ ಫೀಜುಗಳನ್ನು ವಿಧಿಸುವಾಗ ಸಾಧಾರಣ ವಾಗಿ ವ್ಯವಹಾರದ್ರವ್ಯದ ಮೊತ್ತವನ್ನು ಸರ್ಕಾರವು ಗಣನೆಗೆ ತೆಗೆದುಕೊಳ್ಳುತ್ತದೆ.

## ಅಧ್ಯಾಯ ೫

## ರಾಜಕೀಯ ವ್ಯವಸ್ಥೆ ಮತ್ತು ತೆರಿಗೆ

ಸ್ಥಳೀಯ ಸರ್ಕಾರ, ಪ್ರಧಾನ ಅಥವಾ ಕೇಂದ್ರ ಸರ್ಕಾರ, ಸಂಯುಕ್ತ ಸರ್ಕಾರ ಎಂಬುದಾಗಿ ರಾಜಕೀಯ ವ್ಯವಸ್ಥೆ ಮೂರು ರೀತಿಯಾಗಿರುತ್ತದೆ.

### (೧) ಸ್ಥಳೀಯ ಸರ್ಕಾರ

ದೇಶದ ಬೇರೆ ಬೇರೆ ಭಾಗಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಚರ್ಚಿಸಿ ಅಲ್ಲಿಯ ಕಾರ್ಯಗಳನ್ನು ನಿರ್ವಹಿಸಲು ಸ್ಥಳೀಯ ಅಧಿಕಾರಿಗಳೂ ಸ್ಥಳೀಯ ಸಂಸ್ಥೆಗಳೂ ಬೇಕಾಗುವುವು. ಸ್ಥಳೀಯಸಂಸ್ಥೆಗಳೆಂದರೆ ಜಿಲ್ಲೆ, ಪಟ್ಟಣ ಅಥವಾ ಗ್ರಾಮ—ಇವುಗಳಿಗೆ ಸೇರಿದುವು. ಸ್ಥಳೀಯ ಸಂಸ್ಥೆಗಳ ಅಥವಾ ಸರ್ಕಾರಗಳ ಕರ್ತವ್ಯ ಅನೇಕವಾಗಿದೆ. ಅವು ಪ್ರಧಾನ ಸರ್ಕಾರದ ಕಾನೂನಿನಂತೆ ಏರ್ಪಟ್ಟು ಕೆಲಸಮಾಡುತ್ತವೆ; ತಮ್ಮ ಆಡಳಿತಕ್ಕೆ ಒಳಪಟ್ಟ ಪ್ರಜೆಗಳ ಕ್ಷೇಮಲಾಭವನ್ನು ನೋಡಿಕೊಳ್ಳುತ್ತವೆ. ನಮ್ಮ ದೇಶದಲ್ಲಿರುವ ಸ್ಥಳೀಯ ಸಂಸ್ಥೆಗಳು ಮೂರು ಬಗೆಯಾಗಿವೆ :

೧. ಗ್ರಾಮಪಂಚಾಯತಿಗಳು.

೨. ಮುನಿಸಿಪಾಲಿಟಿ.

೩. ಜಿಲ್ಲಾಬೋರ್ಡು.

೧. ಗ್ರಾಮಪಂಚಾಯತಿ—

ಹಳ್ಳಿಗಳ ಯುಗವು ಈಚೆಗೆ ಪ್ರಾರಂಭವಾಗಿದೆಯೆಂದರೆ ಅದು ಅತಿಶಯೋಕ್ತಿಯ ಮಾತಾಗದು. ಎಲ್ಲೆಲ್ಲಿಯೂ ಗ್ರಾಮ ಪಂಚಾಯತಿಗಳಿರಬೇಕೆಂದು ತೀರ್ಮಾನವಾಗಿದೆ. ಅನಿವಾರ್ಯ ಕರ್ತವ್ಯ, ಐಚ್ಛಿಕ ಕರ್ತವ್ಯ, ಪ್ರಧಾನ ಸರ್ಕಾರದವರು ವಿಧಿಸ ಬಹುದಾದ ಕರ್ತವ್ಯ ಎಂದು ವಿಂಗಡವಾದ ಕೆಲವು ಕೆಲಸ ಗಳನ್ನು ಈ ಸಂಸ್ಥೆಗಳಿಗೆ ವಹಿಸುವ ವಾಡಿಕೆ ಬಂದಿದೆ. ಗ್ರಾಮ ಗಳ ಜೀರ್ಣೋದ್ಧಾರ ಕಾರ್ಯವನ್ನು ಈ ಸಂಸ್ಥೆಗಳ ಮೂಲಕ ನಡಸಬೇಕೆಂದು ಅನೇಕರು ಹೇಳುತ್ತಾರೆ. ಪ್ರಧಾನ ಸರ್ಕಾರ ದವರೂ ಜಿಲ್ಲಾಬೋರ್ಡಿನವರೂ ನಿಯತವಾದ ಹಣವನ್ನು ಕೊಟ್ಟು ಕಾರ್ಯನಿರ್ವಾಹಮಾಡಲು ಈ ಸಂಸ್ಥೆಗಳಿಗೆ ಸಹಾ ಯಮಾಡಬಹುದು. ಕೆಲವು ಹುಟ್ಟುವಳಿ ಬಾಬುಗಳನ್ನು ಭಾಗ ಮಾಡಿ ಒಂದು ಭಾಗವನ್ನು ಪಂಚಾಯತಿಗಳಿಗೇ ಒಪ್ಪಿಸುವು ದೊಂದು ಮಾರ್ಗ. ಇವುಗಳಲ್ಲದೆ ನಗರಸಭೆಗಳಿಗಿರುವಂತೆ ಕೆಲವು ತೆರಿಗೆಗಳನ್ನು ವಿಧಿಸುವ ಅಧಿಕಾರವನ್ನು ಪಂಚಾಯತಿ ಗಳಿಗೇ ಕೊಡುವುದಿನ್ನೊಂದು ಮಾರ್ಗ. ಮನೆ, ಅಂಗಡಿ, ವ್ಯಾಪಾರಸ್ಥಳ, ಪಾಳುನಿವೇಶನ—ಇವುಗಳ ಮೇಲೆ ಪಂಚಾ ಯತಿಗಳು ತೆರಿಗೆ ವಿಧಿಸಬಹುದು. ಹಳ್ಳಿಯಲ್ಲಿರುವ ಜನರಿಂದ ಸಾಮಾನ್ಯವಾದ ಕಾರ್ಯಗಳಿಗೆ ಕೂಲಿಯ ಅಥವಾ ಸೇವೆಯ ರೂಪದಲ್ಲಿ ಒಂದು ವಿಧವಾದ ತೆರಿಗೆಯನ್ನೂ ವಿಧಿಸುವು ದುಂಟು.

೨. ಮುನಿಸಿಪಾಲಿಟಿ—

ನಗರವಾಸಿಗಳ ಹಿತಸಾಧನೆಯು ಮುನಿಸಿಪಾಲಿಟಿಗಳ

ಮುಖ್ಯ ಕರ್ತವ್ಯ: ಕೆಲವು ತೆರಿಗೆಗಳನ್ನು ಹಾಕುವ ಅಧಿಕಾರ ಅವುಗಳಿಗೆ ಇರುತ್ತದೆ. ಮನೆಗಂದಾಯ, ಕಸಬು ತೆರಿಗೆ, ಬಹು ಜನರು ಉಪಯೋಗಿಸುವ ಪದಾರ್ಥಗಳ ಮೇಲಿನ ಸುಂಕ (ಆಕ್ಟ್ರಾಯ್), ವಿನೋದ ಮತ್ತು ಮನೋರಂಜಕ ಸಾಮಗ್ರಿ ಗಳ ಮೇಲಿನ ತೆರಿಗೆ, ಯಾನ ಮತ್ತು ವಾಹನಗಳ ಮೇಲೆ ತೆರಿಗೆ—ಇವು ಮುಖ್ಯವಾದುವುಗಳು. ಈ ತೆರಿಗೆಗಳಲ್ಲದೆ ಇತರ ವಿಧದ ಹುಟ್ಟುವಳಿಯೂ ಉಂಟು. ಕಲ್ಕತ್ತ, ಬೊಂಬಾಯಿ ಮೊದಲಾದ ದೊಡ್ಡ ದೊಡ್ಡ ನಗರಸಭೆಗಳ ಆದಾಯವು ಕೆಲವು ಸಂಸ್ಥಾನಗಳ ಆದಾಯಕ್ಕಿಂತಲೂ ಹೆಚ್ಚಾಗಿದೆ. ಆರೋಗ್ಯ ಪಾಲನೆ, ರಸ್ತೆಗಳ ದುರಸ್ತು, ವಿದ್ಯಾಭ್ಯಾಸ, ವಸತಿ ಇವೇ ಮೊದಲಾದ ಕಾರ್ಯಗಳು ಮುನಿಸಿಪಾಲಿಟಿಗೆ ವಿೂಸಲಾಗಿವೆ. ಆವಶ್ಯಕವಿದ್ದಾಗ ಪ್ರಧಾನ ಸರ್ಕಾರವು ಇವುಗಳಿಗೆ ದ್ರವ್ಯ ಸಹಾಯ ಮಾಡಬಹುದು.

**೩. ಜಿಲ್ಲಾ ಬೋರ್ಡು—**

ಆಯಾ ಜಿಲ್ಲೆಗಳಲ್ಲಿರುವ ಪ್ರಜೆಗಳ ಆಯುರಾರೋಗ್ಯ ಸಂಪದಭಿವೃದ್ಧಿಗೆ ಸಹಾಯವಾಗುವ ಕಾರ್ಯಗಳನ್ನು ಜಿಲ್ಲಾ ಬೋರ್ಡಿನವರು ನಡೆಸುವರು. ರಸ್ತೆ ಮಾಡಿಸುವುದು, ಸೇತುವೆ ಕಟ್ಟಿಸುವುದು, ಆಸ್ಪತ್ರೆಗಳ ಸ್ಥಾಪನೆ, ಕುಡಿಯುವ ನೀರನ್ನು ಒದಗಿಸುವುದು, ಪ್ರಾಥಮಿಕ ವಿದ್ಯಾಭ್ಯಾಸ ಪ್ರಚಾರ—ಇವೇ ಮೊದಲಾದ ಕಾರ್ಯಗಳನ್ನು ಜಿಲ್ಲಾಬೋರ್ಡುಗಳು ನಡೆಸ ಬೇಕು. ಆದ್ದರಿಂದ ಅವಕ್ಕೆ ಕೆಲವು ತೆರಿಗೆಗಳನ್ನು ಹಾಕುವ ಅಧಿಕಾರವಿರುತ್ತದೆ. ತೆರಿಗೆಗಳಿಗಿಂತಲೂ ಮುಖ್ಯವಾದುವು ಸೆಸ್ಸುಗಳು. ಇವನ್ನು ಜಿಲ್ಲಾಬೋರ್ಡಿನ ಪರವಾಗಿ ಪ್ರಧಾನ

ಸರ್ಕಾರವೇ ಭೂಕಂದಾಯದ ಜೊತೆಯಲ್ಲಿ ವಸೂಲುಮಾಡು ತ್ತದೆ. ನೂರು ರೂಪಾಯಿ ಭೂಕಂದಾಯಕ್ಕೆ ಸ್ಥಳೀಯ ಸೆಸ್ಸು ರೂ. ೬-೪-೦ ; ಇದನ್ನು ಕೇಂದ್ರ ಸರ್ಕಾರವು ಸಂಗ್ರಹಿಸಿ, ಬಂದ ಮೊಬಲಗನ್ನು ಸ್ಥಳೀಯ ಸಂಸ್ಥೆಗಳ ಕಾರ್ಯಗಳಿಗಾಗಿ ಮೀಸಲಾಗಿಡುತ್ತದೆ.

ಈ ಮೂರು ಸಂಸ್ಥೆಗಳೂ ಕೇಂದ್ರ ಸರ್ಕಾರದೊಡನೆ ಸಹಕರಿಸಿ ಕೆಲಸ ನಡೆಸುವುದರಿಂದ ಯಾವ ಬಗೆಯ ಒಳ ಘರ್ಷಣೆಗೂ ಅವಕಾಶವಿರುವುದಿಲ್ಲ.

## (೨) ಪ್ರಧಾನ ಅಥವಾ ಕೇಂದ್ರ ಸರ್ಕಾರ

ಸ್ಥಳೀಯ ಸಂಸ್ಥೆಗಳ ಆಡಳಿತವು ಎಲ್ಲ ಪ್ರದೇಶಗಳಲ್ಲಿಯೂ ಏಕರೀತಿಯಾಗಿ ನಡೆಯುವಂತೆ ನೋಡಿಕೊಳ್ಳುವುದು ಪ್ರಧಾನ ಸರ್ಕಾರದ ಕರ್ತವ್ಯಗಳಲ್ಲಿ ಒಂದು. ಸ್ಥಳೀಯ ಸಂಸ್ಥೆಗಳಿಗೆ ಹೆಚ್ಚಿನ ಸ್ವಾತಂತ್ರ್ಯವನ್ನು ಕೊಡುವುದೇ ಆಗಲಿ ಬಿಡುವುದೇ ಆಗಲಿ ಅದರ ವಿಮರ್ಶೆಗೆ ಒಳಪಟ್ಟಿದೆ. ತೆರಿಗೆಗಳ ವಿಷಯ ದಲ್ಲಿಯೂ ಅದು ತನ್ನ ಅಧಿಕಾರವನ್ನು ಚಲಾಯಿಸಿ ಅವು ಗಳಿಂದ ಕೆಲಸಮಾಡಿಸಿಕೊಳ್ಳುತ್ತದೆ. ಒಟ್ಟಿನಮೇಲೆ ಆಡಳಿತ ದಲ್ಲಿ ಸಾಮರಸ್ಯವನ್ನುಂಟುಮಾಡಿ ದೇಶದ ಎಲ್ಲಾ ಪ್ರಜೆಗಳಿಗೂ ರಕ್ಷಣೆ ಶಾಂತಿ ನೆಮ್ಮದಿಗಳು ದೊರೆಯುವಂತೆ ಮಾಡುವುದು ಇದರ ಕೆಲಸ.

## (೩) ಸಂಯುಕ್ತ ಸರ್ಕಾರ

ವಿಶಾಲವಾದ ಭೂಪ್ರದೇಶದಲ್ಲಿ ಅನೇಕ ಪ್ರಧಾನ ಸರ್ಕಾರ ಗಳು ಇರುತ್ತವೆ. ಅವುಗಳ ರಚನೆ ಯಾವಾಗಲೂ ಒಂದೇ

ರೀತಿಯಾಗಿರುವುದಿಲ್ಲ. ಆಡಳಿತದಲ್ಲಿ ಏಕರೂಪತೆ ಆವಶ್ಯಕವೆಂದು ಕಂಡುಬಂದಾಗ ಇವೆಲ್ಲ ಒಟ್ಟಿಗೆ ಸೇರಿ ಸಂಯುಕ್ತ ಸರ್ಕಾರವನ್ನು ಸ್ಥಾಪಿಸಿಕೊಳ್ಳಬಹುದು. ಸಮಾನವಾದ ಉದ್ದೇಶಗಳೂ ಆಶೆ ಆಕಾಂಕ್ಷೆಗಳೂ ಸಂಸ್ಕೃತಿಯೂ ಇರುವಾಗ ಕೂಡ ಸಂಯುಕ್ತ ಸರ್ಕಾರವನ್ನು ಏರ್ಪಡಿಸಬಹುದು. ಇದರಿಂದ ಯಾವುದೊಂದು ಪ್ರಧಾನ ಸರ್ಕಾರದ ಸ್ವಾತಂತ್ರ್ಯಕ್ಕೂ ಚ್ಯುತಿ ಬರುವುದಿಲ್ಲ. ಇಂತಹ ಸಂಯುಕ್ತ ರಾಜ್ಯಾಂಗ ವ್ಯವಸ್ಥೆ ೧೯೩೩ ರಲ್ಲಿ ಪ್ರಕಟವಾದ "ಗವರ್ನಮೆಂಟ್ ಆಫ್ ಇಂಡಿಯಾ ಆ್ಯಕ್ಟ್" ಎಂಬ ವಿಧಿಯ ಪ್ರಕಾರ ಇಂಡಿಯಾ ದೇಶದಲ್ಲಿ ಜಾರಿಗೆ ಬರಬೇಕಾಗಿದೆ. ಹೀಗಾದರೆ ಪ್ರಧಾನ ಸರ್ಕಾರಗಳಲ್ಲಿ ಒಂದಾದ ಮೈಸೂರು ಅದಕ್ಕೆ ಸೇರಬೇಕಾಗಬಹುದು. ಇದು ಮೈಸೂರಿನ ಸಮಸ್ಯೆ ಮಾತ್ರವೇ ಅಲ್ಲ. ಇತರ ದೇಶೀಯ ಸಂಸ್ಥಾನಗಳಿಗೂ ಅನ್ವಯಿಸುವ ವಿಷಯ.

ಈಗಿರುವ ಸ್ಥಿತಿಯಲ್ಲಿ ಸಂಸ್ಥಾನಗಳು ಇಂಡಿಯಾ ಸರ್ಕಾರದ ಆಡಳಿತದಲ್ಲಿ ಹೆಚ್ಚಿನ ರಾಜಕೀಯ ಆರ್ಥಿಕ ಅಧಿಕಾರಗಳನ್ನು ಹೊಂದುವುದು ಸಾಧ್ಯವಾಗಿಲ್ಲ. ಆದರೂ ಇಂಡಿಯಾ ಸರ್ಕಾರವು ವಿಧಿಸಿದ ತೆರಿಗೆಗಳನ್ನು ಮೈಸೂರು ದೇಶದ ಪ್ರಜೆಗಳು ಕೊಡುತ್ತಿರುವರೆಂಬ ವಿಷಯವನ್ನು ನಾವು ತಿಳಿದಿರಬೇಕು. ಹೊರಗಿನ ದೇಶಗಳಿಂದ ಬರುವ ಅನೇಕ ಪದಾರ್ಥಗಳನ್ನು ನಾವು ಉಪಯೋಗಿಸುವೆವಷ್ಟೆ. ಈ ಸಾಮಾನುಗಳ ಮೇಲೆಲ್ಲ ಇಂಡಿಯಾ ಸರ್ಕಾರವು ಸುಂಕವನ್ನು ವಸೂಲುಮಾಡುತ್ತದೆ. ವ್ಯಾಪಾರದ ಮೇಲಿನ ಸುಂಕದಿಂದ ಬರುವ ಆದಾಯವು ಇಂಡಿಯಾ ಸರ್ಕಾರದ ಮುಖ್ಯ ಹುಟ್ಟುವಳಿ. ನಾವು ಉಪಯೋಗಿಸುವ ಉಪ್ಪಿನ ಮೇಲಿನ ತೆರಿಗೆಯು ಇಂಡಿಯಾ ಸರ್ಕಾರದ

ಖಜಾನೆಗೆ ಸಲ್ಲುವ ಆದಾಯ. ನಾವು ಕೊಳ್ಳುವ ಬೈಸಿಕಲ್ಲುಗಳು, ಗಡಿಯಾರಗಳು, ಮೋಟಾರುಗಳು ಇವೇ ಮೊದಲಾದ ಸಾಮಾನುಗಳ ಮೇಲೆ ಹಾಕಿರುವ ತೆರಿಗೆಗಾಗಿ ಪ್ರತಿ ವರ್ಷವೂ ಲಕ್ಷಾಂತರ ರೂಪಾಯಿಗಳನ್ನು ಮೈಸೂರು ಪ್ರಜೆಗಳಾದ ನಾವು ಬ್ರಿಟಿಷ್ ಇಂಡಿಯಾ ಸರ್ಕಾರಕ್ಕೆ ಸಲ್ಲಿಸುತ್ತಿದ್ದೇವೆ. ಅಲ್ಲದೆ, ಮೈಸೂರು ಪೊಗದಿಯ ರೂಪದಲ್ಲಿ ನೇರವಾದ ತೆರಿಗೆಯನ್ನು ಇಂಡಯಾ ಸರ್ಕಾರಕ್ಕೆ ಸಲ್ಲಿಸುತ್ತಿದೆ.[1] ಇದನ್ನುಳಿದು ಬೇರೆ ಬೇರೆ ರೂಪದಲ್ಲಿ ಮೈಸೂರು ಇಂಡಿಯಾ ಸರ್ಕಾರಕ್ಕೆ ಪ್ರತಿ ವರ್ಷವೂ ಸಲ್ಲಿಸುವ ಮೊತ್ತವು ಒಂದು ಕೋಟಿ ರೂಪಾಯಿಗೆ ಮೀರಿರುತ್ತದೆ. ಎಂದರೆ ತಲೆ ಒಂದಕ್ಕೆ ಸುಮಾರು ಒಂದೂ ಮುಕ್ಕಾಲು ರೂಪಾಯಿಯಷ್ಟು ತೆರಿಗೆಯ ಭಾರವನ್ನು ಮೈಸೂರು ಪ್ರಜೆಗಳು ಹೊತ್ತಿರುತ್ತಾರೆ. ಈ ಹಣವು ನಮ್ಮ ದೇಶದ ಪ್ರಜಾಜೀವನಕ್ಕಾಗಿಯೇ ದೊರೆಯಲು ಸಾಧ್ಯವಾದರೆ ಪ್ರಜೆಗಳ ಕ್ಷೇಮವು ಅಭಿವೃದ್ಧಿಯಾಗಲು ಬಹುಮಟ್ಟಿಗೆ ಅನುಕೂಲವಾಗುವುದು.

ಮೈಸೂರಿಗೆ ದೊರೆಯುವ ಸೌಲಭ್ಯಗಳಿಗೂ ಅದು ಸಲ್ಲಿಸುವ ತೆರಿಗೆಗಳಿಗೂ ಇರುವ ತಾರತಮ್ಯವನ್ನು ಕೆಳಗೆ ಕೊಟ್ಟಿರುವ

---

[1] ೧೭೯೯ ರಿಂದ ಇದುವರೆಗೆ ಸುಮಾರು ೩೪ ಕೋಟಿ ರೂಪಾಯಿಗಳಷ್ಟು ದ್ರವ್ಯವನ್ನು ಈ ರೂಪದಲ್ಲಿ ಮೈಸೂರು ತೆತ್ತಿದೆ. ಇಂಡಿಯಾ ದೇಶದ ಸಂಸ್ಥಾನಗಳ ಹಣಕಾಸಿನ ವಿಚಾರದ ಪರಿಶೀಲನೆಗಾಗಿ ನೇಮಕವಾಗಿದ್ದ "ಇಂಡಿಯನ್ ಸ್ಟೇಟ್ಸ್ ಎನ್‌ಕ್ವೈರಿ ಕಮಿಟಿ (ಫೈನಾನ್ಶಿಯಲ್)" ಎಂಬ ಸಮಿತಿಯವರ ಸಲಹೆ ಮೇರೆ ೧೯೩೭-೩೮ ನೆಯ ಸಾಲಿನಿಂದ ಪೊಗದಿಯಲ್ಲಿ ೫·೩೯ ಲಕ್ಷ ರೂಪಾಯಿಗಳನ್ನು ಸದ್ಯಕ್ಕೆ ಕಡಮೆ ಮಾಡಿದೆ.

ಪಟ್ಟಿಯಿಂದ ಸ್ಥೂಲವಾಗಿ ತಿಳಿಯಬಹುದು.[1]

| ನಮಗೆ ದೊರೆಯುವ ಸೌಕರ್ಯಗಳ ಅಂದಾಜು ಬೆಲೆ | | ಮೈಸೂರು ಕೊಡುವ ತೆರಿಗೆಗಳ ಅಂದಾಜು ಮೊಬಲಗು | |
|---|---|---|---|
| | ಲಕ್ಷ. | | ಲಕ್ಷ ರೂ. |
| ರಕ್ಷಣೆಯ ಸೌಕರ್ಯಕ್ಕೆ | ೧೧೪ | ಪೊಗದಿ | ೨೪॥ |
| ಇಂಡಿಯಾ ಸರ್ಕಾರವು ಕೈಕೊಳ್ಳುವ ಕಾರ್ಯಗಳ ಫಲವನ್ನು ಅನುಭವಿಸುವುದಕ್ಕೆ | ೧೮ | ಸೈನ್ಯದ ಖರ್ಚು | ೯ |
| | | ವಿದೇಶದ ವ್ಯಾಪಾರದ ಮೇಲಿನ ಸುಂಕ | ೯೭ |
| | | ಉಪ್ಪಿನ ತೆರಿಗೆ | ೧೮ |
| | | ನಾಣ್ಯದ ಚಲಾವಣೆ ಮತ್ತು ಇತರ ಬಾಬುಗಳು | ೧೬ |
| ಒಟ್ಟು | ೧೩೨ | ಒಟ್ಟು | ೧೬೪॥ |

ಸಂಯುಕ್ತ ಸರ್ಕಾರ ಬಂದಾಗ ಮೈಸೂರು ತೆರುವ ಪೊಗದಿಯು ರೂಪಾಂತರವನ್ನು ತಾಳುತ್ತದೆ. ರಕ್ಷಣೆಯ ಖರ್ಚಿಗಾಗಿ ಬೇಕಾಗುವ ನಿರ್ದಿಷ್ಟವಾದ ಹಣವನ್ನು ಸಂಯುಕ್ತ ಸರ್ಕಾರವು ಪ್ರಧಾನ ಸರ್ಕಾರಗಳಿಂದ ವಸೂಲು ಮಾಡುತ್ತದೆ. ಮೈಸೂರು ಕೊಡುವ ಪೊಗದಿಯಲ್ಲಿ ೧೭-೧೮ ಲಕ್ಷ ರೂಪಾಯಿಗಳು ಈ ರೀತಿಯಾಗಿ ಸಂದಾಯವಾಗಿ ನಿಂತ ಭಾಗವು ಮೈಸೂರಿಗೇ ದಕ್ಕುತ್ತದೆ. ಸಂಯುಕ್ತ ಸರ್ಕಾರವು ತನ್ನ ಆದಾಯದ ಬಾಬು

[1] *Financial Problems of the States in Federal India by Prof*. V. L. D'Souza, 1935: p. 61.

ಗಳೆಂದು ಗೊತ್ತುಮಾಡಿರುವ ಕೆಲವು ತೆರಿಗೆಗಳನ್ನು ಸಂಸ್ಥಾನ ಗಳ ಮೇಲೆ ಜಾರಿಮಾಡಬಹುದು. ಇದರಿಂದ ಆಗುವ ಲಾಭ ನಷ್ಟಗಳನ್ನು ಈಗ ಹೇಳಲು ಸಾಧ್ಯವಿಲ್ಲ.

---

## ೬. ಪರಿಸಮಾಪ್ತಿ

ಪ್ರತಿಯೊಬ್ಬ ಪ್ರಜೆಯೂ ತನ್ನ ದೇಶದಲ್ಲಿರುವ ಇತರ ಪ್ರಜೆ ಗಳ ಹಿತಕ್ಕಾಗಿ ದುಡಿಯಬೇಕಾದುದೂ ತ್ಯಾಗಮಾಡಬೇಕಾ ದುದೂ ತನ್ನ ಕರ್ತವ್ಯವೆಂದು ಭಾವಿಸಿ ಆ ಮೂಲಕ ತಾನಿ ರುವ ಸಮಾಜದ ಏಳಿಗೆಗೆ ಕಾರಣಕರ್ತನಾಗುವುದು ಆವಶ್ಯಕ. ಹೀಗೆ ಪ್ರಜೆಯು ಸಮಾಜದ ಏಳಿಗೆಗೆ ಕಾರಣಭೂತನಾಗು ವಂತೆ ಮಾಡಲು ಸರ್ಕಾರದ ರಚನೆಯು ನೆರವಾಗಬೇಕು. ಈ ದೃಷ್ಟಿಯಿಂದ ತೆರಿಗೆಗಳನ್ನು ನಾವು ಪರಿಶೀಲಿಸಿದರೆ ಪ್ರಜೆಗಳು ಸಲ್ಲಿಸುವ ಹಣವನ್ನು ಸುಲಿಗೆಯೆಂದು ಭಾವಿಸುವುದು ನ್ಯಾಯ ವಲ್ಲವೆಂಬುದು ವ್ಯಕ್ತವಾಗುತ್ತದೆ.

ಈ ಉಪನ್ಯಾಸಗಳಲ್ಲಿ ತೆರಿಗೆ ಸಿಸ್ತಿಗೆ ಸಂಬಂಧಪಟ್ಟ ಕೆಲವು ಮುಖ್ಯ ವಿಷಯಗಳ ಸ್ಥೂಲ ಪರಿಚಯವನ್ನು ಮಾಡಿಕೊಡ ಲಾಗಿದೆ. ತೆರಿಗೆಗಳನ್ನು ವಿಮರ್ಶಿಸುವಾಗ ಗಮನದಲ್ಲಿಡಬೇ ಕಾದ ಕೆಲವು ಅಂಶಗಳನ್ನೂ ಸೂಚಿಸಲಾಗಿದೆ.

ಸರ್ಕಾರದ ವೆಚ್ಚಗಳು ಹೆಚ್ಚುತ್ತಿರುವ ಈ ಕಾಲದಲ್ಲಿ ವೆಚ್ಚಕ್ಕೆ ತಕ್ಕಷ್ಟು ಆದಾಯವನ್ನು ರೂಢಿಸಲು ಪ್ರಯತ್ನ ನಡೆಯಬೇಕು. ವೆಚ್ಚದ ಬಾಬುಗಳನ್ನು ಕಡಮೆ ಮಾಡಲು ಇರುವ ವಿಧಾನಗಳನ್ನು ಇಲ್ಲಿ ಚರ್ಚಿಸಲು ಅವಕಾಶವಿಲ್ಲ. ಆದಾಯಕರವಾದ ಒಂದೆರಡು ಹೊಸ ತೆರಿಗೆಗಳನ್ನು ಕುರಿತು ಇಲ್ಲಿ ಹೇಳಿದೆ.

ಒಟ್ಟಿನಲ್ಲಿ ಸರ್ಕಾರದ ಕಾರ್ಯಕ್ಷೇತ್ರವು ಹೆಚ್ಚಿ ಪ್ರಜಾ ಸಮುದಾಯದ ಉನ್ನತಿಗೆ ಅವಕಾಶವುಂಟಾಗಬೇಕಾದರೆ ಪ್ರಜೆಗಳು ತೆರಿಗೆಗಳನ್ನು ಸಲ್ಲಿಸಬೇಕು. ಹೀಗೆ ಸಲ್ಲಿಸಲು ತಮ್ಮ ಸಂಪಾದನೆಯ ಶಕ್ತಿಯನ್ನು ಹೆಚ್ಚುಮಾಡಿಕೊಳ್ಳಬೇಕು. ಸಮಾಜದಲ್ಲಿ ಆರ್ಥಿಕ ಸಾಮರಸ್ಯವನ್ನು ಕಲ್ಪಿಸುವುದಕ್ಕೆ ಕೂಡ ಈ ತೆರಿಗೆ ಪದ್ಧತಿ ಸಹಾಯಮಾಡುತ್ತದೆನ್ನಬಹುದು.

ಸರ್ಕಾರದ ಹುಟ್ಟುವಳಿ, ತೆರಿಗೆಯ ಕ್ರಮ, ವೆಚ್ಚದ ನೀತಿ, ಸಾಲದ ರೀತಿ—ಈ ವಿಧವಾಗಿ ಸರ್ಕಾರದ ಆಯವ್ಯಯದ ಕ್ರಮವನ್ನು ವಿಂಗಡಿಸಿ ಆ ಬಾಬುಗಳಿಗೆ ಅನ್ವಯಿಸುವ ಸಾಮಾನ್ಯ ನಿಯಮಗಳನ್ನು ಪ್ರತ್ಯೇಕವಾಗಿ ತಿಳಿಸುವುದು ವಾಡಿಕೆ. ಹೀಗೆ ಸೂಚಿಸುವ ನಿಯಮಗಳನ್ನೇ ಒಂದು ಅಳತೆಕಡ್ಡಿಯಾಗಿಟ್ಟು ಕೊಂಡು ದೇಶದ ವೆಚ್ಚದ ಕ್ರಮ ಸರಿಯಾಗಿದೆಯೇ ಇಲ್ಲವೇ ಎಂದಾಗಲಿ, ಸಾಲದ ಕಟ್ಟುಕಟ್ಟಳೆಗಳು ಶಾಸ್ತ್ರಸಮ್ಮತವಾಗಿವೆಯೇ ಇಲ್ಲವೇ ಎಂದಾಗಲಿ ತಿಳಿಯುವುದು ಸಾಧ್ಯ. ಆದರೂ ಈ ಭಾಗಗಳೆಲ್ಲಾ ಒಂದಕ್ಕೊಂದು ಹೊಂದಿಕೊಂಡಿವೆ ಎಂಬಂಶವನ್ನು ಮರೆಯಬಾರದು. ತೆರಿಗೆಯ ಪದ್ಧತಿ ಸಮರ್ಪಕವಾಗಿದೆಯೇ ಇಲ್ಲವೇ ಎಂದು ತಿಳಿಯಲು ಸರ್ಕಾರದ ಆಯವ್ಯಯ ಮತ್ತು ಸಾಲಸೋಲದ ರೀತಿನೀತಿಗಳ ಪರಿಚಯವೂ ದೇಶದ

ಸಂಪದಭಿವೃದ್ಧಿ ಕಾರ್ಯಗಳಿಗೆ ಸಂಬಂಧಪಟ್ಟ ಸಂಗತಿಗಳ ಪರಿಚಯವೂ ಆವಶ್ಯಕವಾಗುವುದು.

ಕೆಲವು ದಿನಗಳ ಹಿಂದೆ ಮದರಾಸು ಶಾಸನಸಭೆಯಲ್ಲಿ ನಡೆದ ವ್ಯಾಪಾರದ ತೆರಿಗೆಯ ಮೇಲಿನ ಚರ್ಚೆಗೆ ಉತ್ತರವಾಗಿ ಮದರಾಸಿನ ಪ್ರಧಾನಮಂತ್ರಿಗಳು ಹೇಳಿದ ಮಾತುಗಳು ಗಮನಾರ್ಹವಾದುವು. ಸರ್ಕಾರದ ದಾಹವನ್ನು ನೀಗುವ ನೀರಿಗೆ ಅವರು ತೆರಿಗೆಯನ್ನು ಹೋಲಿಸಿದರು. ದಾಹ ಹೋಗಬೇಕಾಗಿದ್ದರೆ ಒಂದು ಲೋಟದಷ್ಟು ನೀರು ಸಾಕಾಗಬಹುದು. ಆದರೆ ಒಂದು ಲೋಟವನ್ನು ಬಾವಿಯೊಳಗೆ ಬಿಟ್ಟು ಅಷ್ಟೇ ನೀರನ್ನು ಯಾರೂ ಸೇದುವುದಿಲ್ಲ. ನಮ್ಮ ದಾಹವನ್ನು ನೀಗಿಕೊಳ್ಳಬೇಕಾದರೆ ಒಂದು ಕೊಡವನ್ನು ಬಿಟ್ಟು ನೀರುಪಡೆದು ಬೇಕಾದಷ್ಟು ನೀರನ್ನು ಉಪಯೋಗಿಸಿಕೊಂಡು ಉಳಿದುದನ್ನು ಬೇರೆ ಉಪಯೋಗಕ್ಕೆ ಇಟ್ಟುಕೊಳ್ಳುವಂತೆ, ಹೆಚ್ಚು ಜನಗಳಿಗೆ ತೊಂದರೆಯಿಲ್ಲದೆ ತೆರಿಗೆಯಿಂದ ಹೆಚ್ಚು ಹಣ ಬಂದರೆ ಆವಶ್ಯಕವಾದ ವೆಚ್ಚಗಳಿಗೆ ಅದನ್ನು ಉಪಯೋಗಿಸಿಕೊಂಡು ಉಳಿದ ಹಣವನ್ನು ಪ್ರಜಾಸೌಕರ್ಯಗಳಿಗಾಗಿಯೇ ವೆಚ್ಚಮಾಡಬಹುದು.

ತೆರಿಗೆ ಜನರಿಂದ ಬಂದು ಜನರ ಪ್ರಯೋಜನಕ್ಕಾಗಿಯೇ ವ್ಯಯವಾಗುವ ಹಣ. ಸರ್ಕಾರವು ಪ್ರಜೆಗಳಿಂದ ತೆರಿಗೆಯನ್ನು ಪಡೆದು "ಕೆರೆಯ ನೀರನ್ನು ಕೆರೆಗೆ ಚಲ್ಲುವಂತೆ" ಪ್ರಜಾಹಿತಕ್ಕಾಗಿ, ಸಮಾಜದ ಅಭ್ಯುದಯಕ್ಕಾಗಿ, ವೆಚ್ಚಮಾಡುತ್ತದೆ ಎಂಬುದನ್ನು ನಾವು ಗಮನದಲ್ಲಿಡಬೇಕು.



## ಪ್ರಚಾರಪುಸ್ತಕಮಾಲೆಯನ್ನು ಕುರಿತು
## ಕೆಲವು ಅಭಿಪ್ರಾಯಗಳು

---

"ಜನಸಾಮಾನ್ಯಕ್ಕೆ ಗಾಢವಾದ ಆಸಕ್ತಿಯಿರುವ ವಿಷಯಗಳ ಮೇಲೆ ವಿಶ್ವವಿದ್ಯಾನಿಲಯದ ಅಧ್ಯಾಪಕರು ಕೊಟ್ಟ ಪ್ರಚಾರೋಪನ್ಯಾಸಗಳನ್ನು ಈ ರೀತಿಯಾಗಿ ಸ್ಥಿರರೂಪದಲ್ಲಿ ನಿಲ್ಲಿಸಬೇಕೆಂಬ ವಿಶ್ವವಿದ್ಯಾನಿಲಯದ ಈ ಪ್ರಯತ್ನವು ನನಗೆ ಮೆಚ್ಚಿಕೆಯಾಗಿದೆ. . . . ಈ ಉದ್ಯಮಕ್ಕಾಗಿ ವಿಶ್ವವಿದ್ಯಾನಿಲಯವನ್ನು ನಾನು ತುಂಬ ಆದರದಿಂದ ಅಭಿನಂದಿಸುತ್ತೇನೆ."

—ಅಮೀನ್-ಉಲ್-ಮುಲ್ಕ್
ಸರ್ ಮಿರ್ಜಾ ಎಂ. ಇಸ್ಮಾಯಿಲ್ ಅವರು.

---

"ಸ್ವಾರಸ್ಯವುಳ್ಳ ವಿಷಯಗಳನ್ನು ಕುರಿತು ಇಷ್ಟು ಸುಂದರವಾದ ಕೈಪಿಡಿಗಳನ್ನು ಪ್ರಕಟಿಸಿರುವುದಕ್ಕಾಗಿ ನಿಮ್ಮನ್ನು ಅಭಿನಂದಿಸುತ್ತೇನೆ. ಇವು ಅಚ್ಚರಿಗೊಳಿಸುವಷ್ಟು ಅಗ್ಗವಾಗಿವೆ; ಒಳ್ಳೆಯ ಮುದ್ರಣಕ್ಕೆ ಇಲ್ಲಿರುವುದಕ್ಕಿಂತ ಹೆಚ್ಚಾಗಿ ಬಯಸಬೇಕಾದದ್ದೇನಿದೆ?"

—ಶ್ರೀಮಾನ್ ರಂ. ರಾ. ದಿವಾಕರ ಅವರು.

" ಇವು ಜೇಬಿನಲ್ಲಿ ಅಡಗಬಹುದಾದ ಸಣ್ಣ ಆಕಾರದಲ್ಲಿ ಮುದ್ದಾಗಿ ಅಚ್ಚಾಗಿವೆ. . . . ಆಯಾ ಶಾಸ್ತ್ರದಲ್ಲಿ ಸುರಿತ ವಿದ್ವಾಂಸರು ಸಪ್ರಮಾಣವಾಗಿ, ರಸವತ್ತಾಗಿ, ಸುಲಭವಾಗಿ ಬರೆದಿರುತ್ತಾರೆ. . . ."

—'ಪ್ರಬುದ್ಧ ಕರ್ಣಾಟಕ.'

---

"ವಿಶ್ವವಿದ್ಯಾನಿಲಯದ ಅಧ್ಯಾಪಕ ಸಂಘದವರು ನಡೆಸುತ್ತಿರುವ ಸಂಸ್ಕೃತಿಯ ಸಪ್ತಾಹಗಳ ಬೆಲೆಯನ್ನು ಕಟ್ಟುವುದಕ್ಕೆ ಆಗುವುದಿಲ್ಲ. ಸಂಸ್ಕೃತಿ ಪ್ರಸಾರವನ್ನು ಮೀರಿಸಿದ ಕೆಲಸ ಇನ್ನೊಂದುಂಟೆ? ಖಂಡಿತವಾಗಿಯೂ ಇಲ್ಲ. ಆದಕಾರಣ ಲಘು ಸಾಹಿತ್ಯವನ್ನು ಸಿದ್ಧಮಾಡಿಸಿ ಅವುಗಳನ್ನು ಜನಸಾಮಾನ್ಯದಲ್ಲಿ ಪ್ರಕಟಿಸುತ್ತಿರುವ ವಿಶ್ವವಿದ್ಯಾನಿಲಯದವರನ್ನು ನಾವು ಎಷ್ಟು ವಿಧವಾಗಿ ಹೊಗಳಿದರೂ ಕಡಿಮೆ. ಈ ಉಪಕಾರಕ್ಕಾಗಿ ಕನ್ನಡನಾಡಿನ ಜನರು ವಿಶ್ವವಿದ್ಯಾನಿಲಯಕ್ಕೆ ಅತ್ಯಂತ ಋಣಿಗಳಾಗಿದ್ದಾರೆ. . . . . . . . . . . . . . . . . .

ವಿಶ್ವವಿದ್ಯಾನಿಲಯದ ಉದ್ದೇಶ್ಯವು ಇಂತಹ ಪ್ರೌಢ ಪ್ರಬಂಧಗಳಿಂದ ಸಾರ್ಥಕವಾಗುವುದರಲ್ಲಿ ಲೇಶವೂ ಸಂದೇಹವಿಲ್ಲ. ಪ್ರಚಾರಪುಸ್ತಕ ಮಾಲೆಯ ವ್ಯವಸ್ಥಾಪಕರನ್ನು ಅಭಿನಂದಿಸಲೇಬೇಕು. ಮುದ್ದಾದ ಅಚ್ಚು, ಕಟ್ಟು. ಬೆಲೆ ಕೇವಲ ೨ ಆಣೆ."

— 'ವಿಶ್ವ ಕರ್ಣಾಟಕ.'

೧೦. ಪಂಪ—ತೀ. ನಂ. ಶ್ರೀಕಂಠಯ್ಯ, ಎಂ.ಎ.

೧೧. ಪ್ರಾಣಿಜೀವನ—ಎ. ನಾರಾಯಣರಾವ್, ಎಂ ಎಸ್‌ಸಿ.

೧೨. ಕನಸುಗಳು—ಎಸ್. ಎಸ್. ನಾರಾಯಣಶಾಸ್ತ್ರಿ, ಎಂ.ಎ

೧೩. ಮದುವೆ—ನಾ. ಕಸ್ತೂರಿ, ಎಂ.ಎ., ಬಿ.ಎಲ್.

೧೪. ನಮ್ಮ ಆರ್ಥಿಕ ದೃಷ್ಟಿ—ಎಸ್. ಗೋಪಾಲಸ್ವಾಮಿ, ಎಂ.ಎ.

೧೫. ವಾಯುಗುಣ—ಕೆ. ಶೇಷಾದ್ರಿ ಅಯ್ಯಂಗಾರ್, ಎಂ.ಎಸ್‌ಸಿ, ಎಲ್‌ಎಲ್.ಬಿ.

೧೬. ಬೆಳಕು—ಟಿ. ಎಸ್. ಸುಬ್ಬರಾಯ, ಎಂ.ಎಸ್‌ಸಿ.

೧೭. ಕನ್ನಡ ಕಾದಂಬರಿ—ವಿ. ಸೀತಾರಾಮಯ್ಯ, ಎಂ.ಎ.

